



# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



Vol-14 November - 2016 Issue No. 11 ₹ 10/-



Sri Vajubhai Rudabhai Vala, H.E. the Governor of Karnataka and Patron BS&G, Karnataka Released the Flag Day Stickers on 7th November 2016 at Raj Bhavan, Bengaluru. Sri M.A. Khalid, State Commissioner(S), Smt. Geetha Natraj, State Commissioner(G), Sri Winston Jacob, ASC(S), Smt. Radha Venkatesh, ASC(G) Master Karthik, Rover and Kum. Navyasri, Guide are seen.







mt. G. Padmavathi, Worshiful Mayor of Bruhat Bengaluru Mahanagara Palike Released the lag day Stickers on 7th November 2016 at Akhila Karnataka Makkala Koota, Bengaluru t a function Organized by Bengaluru South District. Sri P. Mohan Kumar, Councellor mt. Kokila Chandrashekar, Councellor, Sri P.G.R. Sindhia, State Chief Commissiner, ri N. Anand, Treasurer Bengluru South Dist. Scouts & Guides are seen.



ನವೆಂಬರ್ 13ರಂದು ಮೈಸೂರು ರಾಜಮನೆತನದ ಶ್ರೀಮತಿ ಪ್ರಮೋದ ದೇವಿ ಒಡೆಯರ್ ಅವರನ್ನು ಭೇಟಿ ಮಾಡಿ 17ನೆಯ ರಾಷ್ಟ್ರೀಯ ಜಾಂಬೂರಿಯನ್ನು ನಡೆಸಲು ಸಹಕಾರಕೋರಿ ಜಾಂಬೂರಿಯ ಕಾರ್ಯಕ್ರಮದಲ್ಲಿ ಭಾಗವಹಿಸಲು ಆಹ್ವಾನಿಸಲಾಯಿತು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು(ಸ್ಕೌ), ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು, ಮೈಸೂರು ಜಿಲ್ಲೆ, ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿ, ಶ್ರೀ ಮೋಹನ್ ಕೊಂಡಜ್ಜಿ, ರಾಜ್ಯ ಸ್ಥಾನಿಕ ಆಯುಕ್ತರು, ಶ್ರೀ ಎಂ.ಎನ್. ಸುರೇಶ್ ಕುಮಾರ್, ಶ್ರೀ ಅಜಯ್ ಕುಮಾರ್ ಜೈನ್, ಜಿಲ್ಲಾ ಸ್ಥಾನಿಕ ಆಯುಕ್ತರುಗಳು ಹಾಗೂ ಇತರರನ್ನು ಕಾಣಬಹುದು.



ನವೆಂಬರ್ 1 ರಂದು ಗದಗನಲ್ಲಿ ನಡೆದ ಕನ್ನಡ ರಾಜ್ಯೋತ್ಸವ ಸಂದರ್ಭದಲ್ಲಿ ಜರುಗಿದ ಪಥಸಂಚಲನದಲ್ಲಿ 2ನೇ ಸ್ಥಾನ ಪಡೆದ ಗೈಡ್‌ಗಳಿಗೆ ಶ್ರೀ ಹೆಚ್.ಕೆ. ಪಾಟೀಲ್, ಮಾನ್ಯ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಸಚಿವರು ಬಹುಮಾನ ವಿತರಣೆ ಮಾಡುತ್ತಿರುವುದು.



ನವೆಂಬರ್ 7 ರಂದು ಸಂಸ್ಥಾಪನಾ ದಿನಾಚರಣೆಯ ಅಂಗವಾಗಿ ಶ್ರೀ ಕೆ.ಜೆ. ಜಾರ್ಜ್, ಮಾನ್ಯ ಬೆಂಗಳೂರು ಅಭಿವೃದ್ಧಿ ನಗರ ಯೋಜನಾ ಸಮಿತಿ ಸಚಿವರು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡುತ್ತಿರುವುದು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀಮತಿ ಕೃಪ ವಿಜಯ್, ಎ.ಎಲ್.ಟಿ.(ಗೈ), ಶ್ರೀ ಬಿ.ಆರ್. ಅನಿಲ್ ಕುಮಾರ್, ಕೇಂದ್ರ ಸ್ಥಾನಿಕ ಆಯುಕ್ತರು ಇವರುಗಳನ್ನು ಕಾಣಬಹುದು.



ನವೆಂಬರ್ 7 ರಂದು ಜರುಗಿದ ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಶ್ರೀ ಆರ್.ವಿ. ದೇಶಪಾಂಡೆ, ಮಾನ್ಯ ಬೃಹತ್ ಮತ್ತು ಮಧ್ಯಮ ಕೈಕಾರಿಗೆ ಹಾಗೂ ಮೂಲ ಸೌಕರ್ಯ ಅಭಿವೃದ್ಧಿ ಸಚಿವರು ಧ್ವಜ ಚೀಟಿಗಳನ್ನು ಬಿಡುಗಡೆ ಮಾಡುತ್ತಿರುವುದು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀಮತಿ ಗೀತಾನಟರಾಜ್, ರಾಜ್ಯ ಆಯುಕ್ತರು(ಗೈ), ಶ್ರೀಮತಿ ರಾಧಾ ವೆಂಕಟೇಶ್, ಸಹಾಯಕ ರಾಜ್ಯ ಆಯುಕ್ತರು(ಗೈ), ಶ್ರೀ ಬಿ.ಆರ್. ಅನಿಲ್ ಕುಮಾರ್, ರಾಜ್ಯ ಸ್ಥಾನಿಕ ಆಯುಕ್ತರು ಮತ್ತು ಸ್ಕೌಟ್ಸ್-ಗೈಡ್ಸ್‌ಗಳನ್ನು ಕಾಣಬಹುದು.



ನವೆಂಬರ್ 1 ರಂದು ರಾಯಚೂರಿನಲ್ಲಿ ಕನ್ನಡ ರಾಜ್ಯೋತ್ಸವ ಅಂಗವಾಗಿ ನಡೆದ ಪಂಥಸಂಚಲನದಲ್ಲಿ ಬಹುಮಾನ ಗಳಿಸಿದ ಗೈಡ್ಸ್‌ಗಳಿಗೆ ಶ್ರೀಮತಿ ಉಮಾಶ್ರೀ ಮಾನ್ಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಸಚಿವರು ಪ್ರಶಸ್ತಿ ವಿತರಣೆ ಮಾಡುತ್ತಿರುವುದು.



ನವೆಂಬರ್ 1 ರಂದು ಹಾವೇರಿಯಲ್ಲಿ ಕನ್ನಡ ರಾಜ್ಯೋತ್ಸವ ಅಂಗವಾಗಿ ನಡೆದ ಪಂಥಸಂಚಲನದಲ್ಲಿ ಬಹುಮಾನ ಗಳಿಸಿದ ಗೈಡ್ಸ್‌ಗಳಿಗೆ ಶ್ರೀ ರುದ್ರಪ್ಪ ಮ. ಲಮಾಣಿ, ಮಾನ್ಯ ಮುಜರಾಯಿ ಹಾಗೂ ಜವಳಿ ಖಾತೆ ರಾಜ್ಯ ಸಚಿವರು ಪ್ರಶಸ್ತಿ ವಿತರಣೆ ಮಾಡುತ್ತಿರುವುದು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



## ಪರಿವಿಡಿ




ಸಂಚಿಕೆಯ ವಾರ್ಷಿಕ ಚಂದಾ ರೂ. 100 / -
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100 / - ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017, 2226 7470
ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
www.kondajjibasappa.org
www.kondajjibasappa.com

ನಮ್ಮ ಸಂಸ್ಥೆಯ ಫೇಸ್‌ಬುಕ್
The Bharat Scouts-Guides Karnataka




# ರಾಜ್ಯ ಮುಖ್ಯ ಆಯುಕ್ತರ ನುಡಿ



ಪ್ರಿಯ ಓದುಗ ಬಂಧುಗಳೇ

ಸಸ್ನೇಹ ನಮಸ್ಕಾರಗಳು

ಕಳೆದ ತಿಂಗಳ ರಾಜ್ಯ ಮುಖ್ಯ ಆಯುಕ್ತರ ನುಡಿಯಲ್ಲಿ "ಈಗ ಎಲ್ಲರ ಚಿತ್ತ ; ಜಾಂಬೂರಿಯತ್ತ" ಎಂದು ಬರೆದಿದ್ದೆ. ಚಿತ್ತದಿಂದ ಮಾತ್ರವಲ್ಲ ಕಾಯಾ, ವಾಚಾ, ಮನಸಾ ಸಂಘಟನೆಯಲ್ಲಿ ತೊಡಗಿಕೊಂಡು ಜಾಂಬೂರಿಯನ್ನು ಸಾಕ್ಷಾತ್ಕರಿಸಿಕೊಳ್ಳುವ ಸಮಯವೀಗ ಬಂದಿದೆ. ಇಡೀ ಸಂಘಟನೆಯೇ ಒಂದಾಗಿ ಜಾಂಬೂರಿಯ ಕಾರ್ಯಕ್ರಮಗಳ ಯೋಜನೆ, ಸರ್ಕಾರ ಮತ್ತು ಇತರ ಸಂಸ್ಥೆಗಳೊಂದಿಗೆ ಸಂಯೋಜನೆ, ಜಾಂಬೂರಿ ನಿವೇಶನದ ಸಿದ್ಧತೆ ಮೊದಲಾದ ಚಟುವಟಿಕೆಯಲ್ಲಿ ತೊಡಗಿಕೊಂಡಿದೆ. ಕರ್ನಾಟಕ ರಾಜ್ಯ ಸರ್ಕಾರದಿಂದ ನಮಗೆ ಬಹಳ ಮಹತ್ತರವಾದ ಬೆಂಬಲ ಸಿಕ್ಕುತ್ತಿದೆ. ಜಾಂಬೂರಿಯ ಖರ್ಚಿಗಾಗಿ ರೂ. ಹತ್ತು ಕೋಟಿಯನ್ನು ಬಿಡುಗಡೆ ಮಾಡಿದೆ. ಇದರ ಜೊತೆಗೆ ಕರ್ನಾಟಕ ರಾಜ್ಯ ಸರ್ಕಾರದ ಹಲವಾರು ಇಲಾಖೆಗಳು, ಅವುಗಳ ಅಧಿಕಾರಿಗಳು ನಮ್ಮ ಬೆನ್ನಿಗೆ ನಿಂತಿದ್ದಾರೆ. ನಮ್ಮ ಆತ್ಮಸ್ಥೈರ್ಯವನ್ನು ನೂರ್ಮಡಿಸಿದ ಈ ಬೆಂಬಲ ಮತ್ತು ಒಳಗೊಳ್ಳುವಿಕೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯು, ಕರ್ನಾಟಕ ಸರ್ಕಾರಕ್ಕೆ ಯಾವತ್ತೂ ಋಣಿಯಾಗಿರುತ್ತದೆ. ಜಾಂಬೂರಿಯ ಆಯೋಜನೆಗೆ ಕ್ರಿಯಾಪೂರ್ಣವಾಗಿ ತೊಡಗಿಕೊಂಡಿರುವ ಕರ್ನಾಟಕದ ಸನ್ಮಾನ್ಯ ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯನವರು ಮತ್ತು ಮೈಸೂರು ಜಿಲ್ಲೆಯ ಉಸ್ತುವಾರಿ ಸಚಿವರಾದ ಡಾ॥ ಹೆಚ್.ಸಿ.ಮಹದೇವಪ್ಪ, ಸನ್ಮಾನ್ಯ ತನ್ವೀರ್ ಸೇಠ್, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು, ಸನ್ಮಾನ್ಯ ಶ್ರೀ ಬಸವರಾಜರಾಯರೆಡ್ಡಿ, ಉನ್ನತ ಶಿಕ್ಷಣ ಸಚಿವರು, ಸನ್ಮಾನ್ಯ ಶ್ರೀ ಎಚ್.ಎಸ್.ಮಹದೇವ ಪ್ರಸಾದ್, ಸಹಕಾರ ಮತ್ತು ಸಕ್ಕರೆ ಇಲಾಖೆ ಸಚಿವರು ಇವರು ಸೇರಿದಂತೆ ಕರ್ನಾಟಕ ಸರ್ಕಾರದ ಎಲ್ಲಾ ಸಚಿವರು, ಹಿರಿಯ-ಕಿರಿಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗಕ್ಕೆ ನಾನು ಕೃತಜ್ಞನಾಗಿದ್ದೇನೆ. ಜಾಂಬೂರಿಯ ಯಶಸ್ಸಿನ ಬಹುಪಾಲು ಕರ್ನಾಟಕ ಸರ್ಕಾರದ್ದೇ ಆಗಿದೆ.




ಸನ್ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ 17ನೇಯ ರಾಷ್ಟ್ರೀಯ ಜಾಂಬೂರಿಯ ಪರಿಷತ್ತನ್ನು ರಚಿಸಲಾಗಿದೆ. ಅದರ ಜೊತೆಗೆ ಹದಿನೈದು ಉಪಸಮಿತಿಗಳನ್ನು ರಚಿಸಲಾಗಿದೆ. ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಜಾಂಬೂರಿ ಸಂಯೋಜನಾ ಸಮಿತಿಯೂ ಸೇರಿದಂತೆ ಆರ್ಥಿಕ, ದಾಖಲಾತಿ ಮತ್ತು ವಾಸ್ತವ್ಯ, ಆರೋಗ್ಯ, ನೀರು ಸರಬರಾಜು, ಸ್ವಚ್ಛತೆ, ಸ್ವಾಗತ ಮತ್ತು ಆತಿಥ್ಯ, ಆಹಾರ ಸರಬರಾಜು, ಸಂಚಾರ ಮತ್ತು ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ, ವಿದ್ಯುತ್ ಸಂಪರ್ಕ, ಅಂತಾರಾಷ್ಟ್ರೀಯ ಅಥಿತಿಗಳ ವಿಚಾರಣೆ, ಸ್ಮರಣ ಸಂಚಿಕೆ, ರಕ್ಷಣೆ ಮತ್ತು ತೊಂದರೆಗಳ ನಿರ್ವಹಣೆ, ಮಾಹಿತಿ, ಪ್ರದರ್ಶನ ಮತ್ತು ತಂತ್ರಜ್ಞಾನ, ಪ್ರಚಾರ, ಪ್ರಕಟಣೆ ಮತ್ತು ಮಾಧ್ಯಮ ನಿರ್ವಹಣೆಗಾಗಿ ವಿವಿಧ ಸಮಿತಿಗಳನ್ನು ರಚಿಸಲಾಗಿದೆ. ಸಮಿತಿಗಳಲ್ಲಿ ಸರ್ಕಾರದ ಪ್ರತಿನಿಧಿಗಳ ಜೊತೆಗೆ ನಮ್ಮ ಸಂಸ್ಥೆಯ ಕಾರ್ಯಕರ್ತರೂ

ಇದ್ದಾರೆ. ಸಮಿತಿಗಳು ಸಭೆ ಸೇರಿ ತಮಗೆ ಒಪ್ಪಿಸಿರುವ ಕೆಲಸವನ್ನು ಕಾರ್ಯಗತಗೊಳಿಸಲು ಅಗತ್ಯವಾದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿವೆ. ಮೂವತ್ತು ಸಾವಿರಕ್ಕೂ ಮಿಗಿಲು ಸ್ಕೌಟ್ಸ್ ಮತ್ತು ಗೈಡ್ಸ್ ಸೇರುವ ಜಾಂಬೂರಿಯಲ್ಲಿ ಈ ಸಮಿತಿಗಳ ಜೊತೆಗೆ ನಾವೆಲ್ಲರೂ ಕೂಡಿ ಕೆಲಸ ಮಾಡಬೇಕು. ಅನಿರೀಕ್ಷಿತವಾದ ಹಲವಾರು ಸವಾಲುಗಳನ್ನು ನಾವು ಎದುರಿಸ-ಬೇಕಾಗಬಹುದು. "ಸದಾ ಸಿದ್ಧವಾಗಿರು" ಎಂಬ ಸ್ಕೌಟ್ಸ್ ಧ್ಯೇಯ ನಮಗೆ ಸ್ಫೂರ್ತಿಯಾಗಿರಬೇಕು. ನಾವೆಲ್ಲರೂ ಒಬ್ಬರಿಗೊಬ್ಬರು ಕೈ ಜೋಡಿಸಿ ಒಂದು ಮನಸ್ಸಿನಿಂದ ಜಾಂಬೂರಿಯ ಸಫಲತೆಗಾಗಿ ಪ್ರಯತ್ನಿಸೋಣ ಎಂದು ಮನವಿ ಮಾಡುತ್ತೇನೆ.



ಜಾಂಬೂರಿಯ ಸಿದ್ಧತೆಗೆ ಸಂಬಂಧಿಸಿದಂತೆ, ನವೆಂಬರ್ 9 ರಂದು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿ ಅವರು ವಿವಿಧ ಇಲಾಖೆಗಳ ಮುಖ್ಯ ಅಧಿಕಾರಿಗಳ ಸಭೆಯನ್ನು ಕರೆದಿದ್ದರು. ನಮ್ಮ ಪದಾಧಿಕಾರಿಗಳು ಕೂಡ ಸಭೆಯಲ್ಲಿ ಭಾಗವಹಿಸಿದ್ದರು.ಈ ಸಭೆಯನ್ನು ಅನುಸರಿಸಿ ದಿನಾಂಕ ಹದಿಮೂರನೇ ನವೆಂಬರ್‌ರಂದು ಮೈಸೂರಿನಲ್ಲಿ ಹಲವಾರು ಸಭೆಗಳು ನಡೆದವು. ಈ ಸಂದರ್ಭದಲ್ಲಿ ನಾನು ಸುತ್ತೂರು ಶ್ರೀಗಳನ್ನು, ಮೈಸೂರಿನ ರಾಜಮನೆತನದ ಶ್ರೀಮತಿ ಪ್ರಮೋದಾದೇವಿ ಒಡೆಯರ್ ಮತ್ತು ಇತರ ಗಣ್ಯರನ್ನು ಭೇಟಿ ಮಾಡಿ ಸಹಕಾರ ಕೋರಿದ್ದೇನೆ.




ಪ್ರತಿ ವರ್ಷ ನವೆಂಬರ್ 7ನೇಯ ತಾರೀಖು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಬಹಳ ಪ್ರಮುಖವಾದ ದಿನ. 1950ನೇ ಇಸವಿ ನವೆಂಬರ್ ಏಳನೇ ತಾರೀಖಿನಂದು ಆಗ ದೇಶದಲ್ಲಿ ಕೆಲಸ ಮಾಡುತ್ತಿದ್ದ ವಿವಿಧ ಸ್ಕೌಟ್ಸ್ ಸಂಸ್ಥೆಗಳು ವಿಲೀನಗೊಂಡವು. ಅಧಿಕೃತವಾಗಿ ಭಾರತದಲ್ಲಿ ಸ್ಕೌಟಿಂಗ್, ಬೆಂಗಳೂರಿನಲ್ಲಿ 1909 ರಲ್ಲಿ ಆರಂಭವಾದರೂ ಭಾರತೀಯರಿಗಾಗಿ ಮುಕ್ತವಾದದ್ದು 1913 ರಲ್ಲಿ. **ನ್ಯಾಯಮೂರ್ತಿ ವಿವಿಯನ್ ಬೋಸ್, ಪಂಡಿತ್ ಮದನ ಮೋಹನ ಮಾಳವಿಯಾ, ಪಂಡಿತ್ ಹೃದಯನಾಥ್ ಕುಂಜ್ರು, ಗಿರಿಜಾ ಶಂಕರ ಬಾಜಪೇಯಿ, ಅನಿಬೆಸೆಂಟ್ ಮತ್ತು ಜಾರ್ಜ್ ಅರುಂಡೇಲ್** ಮುಂತಾದವರು ಭಾರತೀಯರಿಗಾಗಿ ಸ್ಕೌಟ್ ಚಳುವಳಿಯನ್ನು ಆರಂಭಿಸಿದರು. ಸೇವಾ ಸಮಿತಿ ಸ್ಕೌಟ್ ಅಸೋಸಿಯೇಷನ್, ಇಂಡಿಯಾ ನ್ಯಾಷನಲ್ ಸ್ಕೌಟ್ ಅಸೋಸಿಯೇಷನ್ ಮತ್ತು ದಿ ಹಿಂದೂಸ್ಥಾನ ಸ್ಕೌಟ್ ಅಸೋಸಿಯೇಷನ್ ಮುಂತಾದ ವಿವಿಧ ಸಂಘಟನೆಗಳು ಸ್ಕೌಟ್ ಚಳುವಳಿಯನ್ನು ಸ್ವಾತಂತ್ರ್ಯ ಪೂರ್ವದಲ್ಲಿ ನಿರ್ವಹಿಸುತ್ತಿದ್ದವು. ಸ್ವಾತಂತ್ರ್ಯ ಬಂದ ನಂತರ ಈ ಎಲ್ಲಾ ಸಂಘಟನೆಗಳನ್ನು ವಿಲೀನಗೊಳಿಸಿ ಒಂದು ಸಂಸ್ಥೆಯನ್ನು ಕಟ್ಟುವ ಅಗತ್ಯವನ್ನು ಕಂಡುಕೊಂಡ ಅಂದಿನ ಪ್ರಧಾನ ಮಂತ್ರಿ ಪಂಡಿತ್ ಜವಹರಲಾಲ್ ನೆಹರೂ, ಅಂದಿನ ಶಿಕ್ಷಣ ಮಂತ್ರಿ ಮೌಲಾನ ಅಬ್ದುಲ್ ಕಲಾಂ ಅಜಾದ್ ಮತ್ತು ಸ್ಕೌಟ್ ನಾಯಕರುಗಳಾದ ಮಂಗಳದಾಸ್ ಪಕ್ವಾಸ್ ಹಾಗೂ ಹೃದಯನಾಥ್ ಕುಂಜ್ರು ಮತ್ತಿತರರು "ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್" ಸಂಸ್ಥೆಯನ್ನು ಕಟ್ಟಿ ಇತರ ಎಲ್ಲಾ ಸಂಘಟನೆಗಳನ್ನು ಅದರಲ್ಲಿ ವಿಲೀನಗೊಳಿಸಿದರು. ಅಂದಿನಿಂದ ನವೆಂಬರ್ ಏಳನೇ ತಾರೀಖನ್ನು ಧ್ವಜ ದಿನಾಚರಣೆನ್ನಾಗಿ ಆಚರಿಸಲಾಗುತ್ತಿದೆ. ಧ್ವಜ ದಿನಾಚರಣೆಯಂದು ಸಾರ್ವಜನಿಕ ಮುಖಂಡರು, ಹಿರಿಯ ಅಧಿಕಾರಿಗಳು, ಗಣ್ಯನಾಗರೀಕರು ಮತ್ತು ಎಲ್ಲರಿಗೆ ಧ್ವಜವನ್ನು ಮಾರಲಾಗುತ್ತದೆ. ಈ ವರ್ಷವೂ ನಮ್ಮ ಪದಾಧಿಕಾರಿಗಳು ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ವಿವಿಧ ಕಛೇರಿಗಳು, ಶಾಲಾ ಕಾಲೇಜುಗಳಲ್ಲಿ ಸ್ಕೌಟ್ಸ್ ಧ್ವಜವನ್ನು ಮಾರಿ ಜನರಲ್ಲಿ ಜಾಗೃತಿಯನ್ನು ಉಂಟುಮಾಡಿದ್ದಾರೆ. ಕ್ರಿಯಾಶೀಲವಾಗಿ ಭಾಗವಹಿಸಿದ ಎಲ್ಲಾ ಪದಾಧಿಕಾರಿಗಳನ್ನು ಮತ್ತು ಸ್ಕೌಟ್ಸ್/ಗೈಡ್ಸ್ ಅವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.









ಜಾಂಬೂರಿಯ ಜೊತೆ ಜೊತೆಗೆ ನಮ್ಮ ಶಿಬಿರಗಳು, ಕಾರ್ಯಗಾರಗಳು ಮತ್ತು ಸಭೆಗಳು ಎಂದಿನಂತೆ ನಡೆಯುತ್ತಿವೆ. ಜಾಂಬೂರಿಯು ಒಂದು ವಿಶೇಷ ಕಾರ್ಯಕ್ರಮ. ನಮ್ಮ ದೈನಂದಿನ ಚಟುವಟಿಕೆಗಳು/ಕಾರ್ಯಕ್ರಮಗಳು ನಮ್ಮ ಸಂಸ್ಥೆಯ ಬುನಾದಿ. ಇವುಗಳನ್ನು ಯಶಸ್ವಿಯಾಗಿ ಸಂಘಟಿಸುವುದು ಸಂಸ್ಥೆಗೆ ಶಕ್ತಿಯನ್ನು ನೀಡುತ್ತದೆ. ಈ ದಿಸೆಯಲ್ಲಿ ಈ ತಿಂಗಳ ಇಪ್ಪತ್ತೆರಡನೇಯ ತಾರೀಖಿನಂದು ನಡೆದ ವಿಶ್ವವಿದ್ಯಾಲಯಗಳ ನೋಡಲ್ ಅಧಿಕಾರಿಗಳ ಸಭೆ ಮಹತ್ವ ಪೂರ್ಣವಾದದ್ದು. ಅವರುಗಳಿಗೆ ನಮ್ಮ ಸಂಸ್ಥೆಯ ಪರಿಚಯ ಮತ್ತು ರೋವರ್ಸ್ ಮತ್ತು ರೇಂಜರ್ಸ್ ಘಟಕಗಳನ್ನು ವಿಶ್ವವಿದ್ಯಾನಿಲಯದಲ್ಲಿ ಸಂಘಟಿಸುವ ಅವಶ್ಯಕತೆಯನ್ನು ಮನದಟ್ಟು ಮಾಡಿಕೊಟ್ಟಿದ್ದೇವೆ.

ಅಂದೇ ನಡೆದ ಯೋಜನಾ ಸಮಿತಿ ಸಭೆಯಲ್ಲಿ ದಳ-ಘಟಕಗಳ ಅಂಕಿ ಅಂಶಗಳನ್ನು ಪರಾಮರ್ಶಿಸುವುದು ಮತ್ತು ಏಪ್ರಿಲ್ ಒಂದರಿಂದೀಚೆಗೆ ಆಗಿರುವ ಚಟುವಟಿಕೆಗಳ ಬಗ್ಗೆ ಪರಿಶೀಲಿಸಲಾಯಿತು. 2016-17ನೇ ಸಾಲಿನಲ್ಲಿ ಜಿಲ್ಲಾ ಸಂಸ್ಥೆಯವರು ಯೋಜಿಸಿರುವ ಕಾರ್ಯಕ್ರಮಗಳು/ಚಟುವಟಿಕೆಯ ವಿವರಗಳ ಬಗ್ಗೆ ಪರಾಮರ್ಶೆ ಮಾಡಲಾಯಿತು.

ದಿನಾಂಕ 23 ನೇ ನವೆಂಬರ್ 2016 ರಂದು ನಡೆದ ರಾಜ್ಯ ಸಹಾಯಕ ಆಯುಕ್ತರುಗಳು, ರಾಜ್ಯ ಸ್ಥಾನಿಕ ಆಯುಕ್ತರುಗಳು, ಜಿಲ್ಲಾ ಮುಖ್ಯ ಆಯುಕ್ತರುಗಳು, ಜಿಲ್ಲಾ ಆಯುಕ್ತರು, ಜಿಲ್ಲಾ ಕಾರ್ಯದರ್ಶಿಗಳು ಮತ್ತು ಜಿಲ್ಲಾ ತರಬೇತಿ ಆಯುಕ್ತರುಗಳ ಸಭೆಯು 2016-17ನೇ ಸಾಲಿನಲ್ಲಿ ಕೈಗೊಳ್ಳಬೇಕಾದ ತರಬೇತಿಗಳು ಚಟುವಟಿಕೆಗಳು, ಸಮುದಾಯ ಅಭಿವೃದ್ಧಿ ಸೇವಾ ಶಿಬಿರಗಳು, ರಾಜ್ಯ ಜಾಂಬೂರೇಟ್, ಕರ್ನಾಟಕ ದರ್ಶನ ಮತ್ತಿತರ ಚಟುವಟಿಕೆಗಳನ್ನು ಪರಿಶೀಲಿಸಲಾಯಿತು. ಇವೆಲ್ಲವೂ ಸಂಸ್ಥೆಗೆ ಶಕ್ತಿ ಸಂಚಯವನ್ನು ಉಂಟುಮಾಡುವಂತಹದು.

ದಿನಾಂಕ 14 ನೇ ನವೆಂಬರ್, ಮಕ್ಕಳಿಗೆ ಖುಷಿಕೊಡುವ ದಿನ. ಅಂದು ಮಕ್ಕಳನ್ನು ಬಹಳವಾಗಿ ಪ್ರೀತಿಸುತ್ತಿದ್ದ ನಮ್ಮ ದೇಶದ ಪ್ರಥಮ ಪ್ರಧಾನಿ ಪಂಡಿತ್ ಜವಹರಲಾಲ್ ನೆಹರೂ ಅವರ ಹುಟ್ಟುಹಬ್ಬ. ನೆಹರೂ ಸ್ಮರಣೆಯೊಂದಿಗೆ ಮಕ್ಕಳ ಬೌದ್ಧಿಕ, ಮಾನಸಿಕ ಮತ್ತು ದೈಹಿಕ ಬೆಳವಣಿಗೆಗೆ ಅಗತ್ಯವಾದ ಕಾರ್ಯಕ್ರಮಗಳನ್ನು ನಾವು ರೂಪಿಸಿದೆವು. ಅಂದು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ಕೊಂಡಜ್ಜಿಯಲ್ಲಿ, ಮಕ್ಕಳ ದಿನಾಚರಣೆಯೊಂದಿಗೆ ಕೊಂಡಜ್ಜಿ ಬಸಪ್ಪನವರ ಮೂವತ್ನಾಲ್ಕನೇಯ ಪುಣ್ಯಸ್ಮರಣೆಯನ್ನು ಮಾಡಲಾಯಿತು. ಲೋಕಸಭಾ ಸದಸ್ಯರಾದ ಶ್ರೀ ಜಿ.ಎಂ.ಸಿದ್ದೇಶ್ವರ್, ಶಾಸಕರಾದ ಶ್ರೀ ಎಚ್.ಎಸ್.ಶಿವಶಂಕರ್, ದಾವಣಗೆರೆ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಶ್ರೀ ಬಿ.ಬಿ.ಕಲಿವಾಳ್ ಅವರುಗಳು ಭಾಗವಹಿಸಿದ್ದರು. ಪ್ರಕಟಣಾ ಸಮಿತಿಯ ಅಧ್ಯಕ್ಷರಾದ ಡಾ. ಗೊ.ರು. ಚನ್ನಬಸಪ್ಪ ಅವರು ಮಾತನಾಡಿದರು.

17ನೇ ರಾಷ್ಟ್ರೀಯ ಜಾಂಬೂರಿಯ ಸಂಘಟನೆಯ ಅಂಗವಾಗಿ ಹಿರಿಯ ಅಧಿಕಾರಿಗಳು, ಮುತ್ಸದ್ದಿಗಳು, ಶೈಕ್ಷಣಿಕ ತಜ್ಞರು, ಕೈಗಾರಿಕೋದ್ಯಮಿಗಳು, ಮಠಾಧೀಶರುಗಳು ಮತ್ತಿತರ ಪ್ರಮುಖರನ್ನು ನಾನು ಭೇಟಿಯಾಗುತ್ತಿದ್ದೇನೆ. ನಮ್ಮ ಸಂಸ್ಥೆಯ ಬಗ್ಗೆ ಅವರಿಗೆ ತಿಳಿಸುವುದರ ಜೊತೆಗೆ ಜಾಂಬೂರಿಗೆ ಆರ್ಥಿಕ ಮತ್ತು ಅಧೋರಚನಾತ್ಮಕ ಸಹಕಾರವನ್ನು ಕೋರುತ್ತಿದ್ದೇನೆ. ನೀವು ಕೂಡ ನಿಮ್ಮ ಒಡನಾಟದಲ್ಲಿ ನೀವು ವಾಸಿಸುವ, ಕೆಲಸ ಮಾಡುವ ಸ್ಥಳಗಳಲ್ಲಿ ಇರುವ ಸಾರ್ವಜನಿಕರನ್ನು ಸಂಪರ್ಕಿಸಿ ಜಾಂಬೂರಿಗೆ ಸಹಾಯ ಹಸ್ತವನ್ನು ನೀಡಲು ಮನವಿ ಮಾಡಿರಿ. ಜಾಂಬೂರಿಯ ಸಂದರ್ಭದಲ್ಲಿ ಹೊರ ತರುತ್ತಿರುವ ಸ್ಮರಣ ಸಂಚಿಕೆಗೆ ಜಾಹಿರಾತುಗಳನ್ನು ಸಂಗ್ರಹಿಸಿ, ಲೇಖನಗಳನ್ನು ನೀಡಿರಿ. ನೀವು ಸಂಗ್ರಹಿಸುವ ಪ್ರತಿ ವಸ್ತುವು, ಹಣವು ನಮಗೆ ಅಮೂಲ್ಯ.

**"ಒಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"**

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ

**ಪಿ.ಜಿ.ಆರ್. ಸಿಂಧ್ಯ**

**ರಾಜ್ಯ ಮುಖ್ಯ ಆಯುಕ್ತರು**

# ರಾಜ್ಯಮಟ್ಟದ ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿ ಶಿಬಿರ

ದಿನಾಂಕ 21-10-2016 ರಿಂದ 27-10-2016 ರ ವರೆಗೆ ಸ್ಕೌಟ್ಸ್ ಮಾಸ್ಟರ್‌ಗಳಿಗೆ ಹಾಗೂ ಕಬ್ ಮಾಸ್ಟರ್‌ಗಳಿಗೆ ರಾಜ್ಯಮಟ್ಟದ ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿ ಶಿಬಿರವನ್ನು ಡಾ॥ ಆನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರದ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ಏರ್ಪಡಿಸಲಾಗಿತ್ತು.






ಶ್ರೀ ಎನ್. ಶ್ರೀನಿವಾಸನ್, ಕೇಂದ್ರ ಸ್ಥಾನಿಕ ಆಯುಕ್ತರು(ತರಬೇತಿ) ಮತ್ತು ಎಲ್.ಟಿ. (ಸ್ಕೌಟ್ಸ್) ರವರು ಶಿಬಿರವನ್ನು ಉದ್ಘಾಟಿಸಿ ಮಾತನಾಡುತ್ತ ಈ ತರಬೇತಿ ದಳನಾಯಕರಿಗೆ ಅತ್ಯುನ್ನತ ತರಬೇತಿಯಾಗಿದ್ದು, ಸ್ಕೌಟ್ಸ್‌ಗಳಿಗೆ ರಾಷ್ಟ್ರಪತಿ ಪುರಸ್ಕಾರದವರಿಗೆ ಗುಣಾತ್ಮಕ ಸ್ಕೌಟಿಂಗ್ ಶಿಕ್ಷಣ ನೀಡಲು ಸಹಕಾರಿಯಾಗಲಿದೆ ಎಂದು ತಿಳಿಸಿ ಪರಿಶ್ರಮದಿಂದ ಈ ತರಬೇತಿಯನ್ನು ಪಡೆದು ತರಬೇತಿಯಲ್ಲಿ ಯಶಸ್ವಿಯಾಗಬೇಕೆಂದು ತಿಳಿಸಿದರು. ಈ ತರಬೇತಿ ಶಿಬಿರದಲ್ಲಿ ರಾಜ್ಯದಾದ್ಯಂತ 66 ಸ್ಕೌಟ್ ಮಾಸ್ಟರ್‌ಗಳು ಮತ್ತು 10 ಕಬ್ ಮಾಸ್ಟರ್‌ಗಳು ಭಾಗವಹಿಸಿದ್ದರು. ಸ್ಕೌಟ್ ಮಾಸ್ಟರ್‌ಗಳ ತರಬೇತಿಯನ್ನು ಎರಡು ಶಿಬಿರಗಳಾಗಿ ವಿಂಗಡಿಸಲಾಗಿತ್ತು.

ಶ್ರೀ ಪ್ರತಿಮ್ ಕುಮಾರ್ ಎಲ್.ಟಿ.(ಸ್ಕೌಟ್ಸ್) ದಕ್ಷಿಣ ಕನ್ನಡ, ಶ್ರೀ ಆನಂದ್ ಅಡಿಗ, ಎಲ್.ಟಿ.(ಸ್ಕೌಟ್ಸ್), ಉಡುಪಿ ಇವರು ನಾಯಕರಾಗಿ ಕಾರ್ಯ ನಿರ್ವಹಿಸಿದರು, ಶ್ರೀ ಜಿ. ಮುನಿನಾರಾಯಣಪ್ಪ, ಎಲ್.ಟಿ.(ಕಬ್), ಕೋಲಾರ ಇವರು ಕಬ್ ಮಾಸ್ಟರ್‌ಗಳ ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿಗೆ ನಾಯಕರಾಗಿ ಕಾರ್ಯನಿರ್ವಹಿಸಿದರು.

ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಎನ್. ಶ್ರೀನಿವಾಸನ್, ಎಲ್.ಟಿ. (ಸ್ಕೌಟ್ಸ್), ಶ್ರೀ ಜಿಮ್ಮಿ ಸಿಕ್ವೇರಾ, ಎಲ್.ಟಿ.(ಸ್ಕೌಟ್), ಶ್ರೀ ಕೆ.ಜಿ. ಗೋಪಾಲಕೃಷ್ಣ, ಎಲ್.ಟಿ.(ಸ್ಕೌಟ್ಸ್), ಶ್ರೀ ಎಂ.ಎಸ್. ಪ್ರಕಾಶ್, ಎ.ಎಲ್.ಟಿ.(ಸ್ಕೌಟ್ಸ್), ಶ್ರೀ ಹರ್ಷಕುಮಾರ್, ಎ.ಎಲ್.ಟಿ. (ಸ್ಕೌಟ್ಸ್), ಶ್ರೀ ಪಿ. ಮಂಜುನಾಥಪ್ಪ, ಎ.ಎಲ್.ಟಿ(ಸ್ಕೌಟ್), ಶ್ರೀ ಎನ್. ಕೃಷ್ಣಮೂರ್ತಿ, ಎ.ಎಲ್.ಟಿ.(ಕಬ್) ಶ್ರೀಮತಿ ಪದ್ಮಾವತಿ, ಹೆಚ್.ಡಬ್ಲ್ಯೂ.ಬಿ. (ಕಬ್), ಶ್ರೀ ವಿ.ಎಂ. ನಾರಾಯಣಸ್ವಾಮಿ ಎಲ್.ಟಿ.(ಕಬ್), ಶ್ರೀ ಆರ್. ಚಂದ್ರಶೇಖರನ್, ಎಲ್.ಟಿ.(ಕಬ್) ಇವರು ಕಾರ್ಯ ನಿರ್ವಹಿಸಿದರು. ಶ್ರೀ ಓ. ಮಂಜಪ್ಪ, ಹೆಚ್.ಡಬ್ಲ್ಯೂಬಿ.(ಸ್ಕೌಟ್ಸ್) ಶಿಬಿರದಲ್ಲಿ ಆಹಾರ ವ್ಯವಸ್ಥೆ ಮೇಲ್ವಿಚಾರಕರಾಗಿ ಕಾರ್ಯ ನಿರ್ವಹಿಸಿದರು. ಶ್ರೀ ಎಲ್.ಟಿ. ಲೋಕೇಶ್ ರಾಜ್ಯ ತರಬೇತಿ ಆಯುಕ್ತರು(ಸ್ಕೌಟ್ಸ್) ಶಿಬಿರದ ಮೇಲುಸ್ತುವಾರಿ ವಹಿಸಿದ್ದರು.

ದಿನಾಂಕ 25-10-2016 ರಂದು ಬನ್ನಿ ಮಂಗಲದ ಶ್ರೀ ಆಂಜನೇಯಸ್ವಾಮಿ ದೇವಾಲಯಕ್ಕೆ ಹೊರಸಂಚಾರ ಏರ್ಪಡಿಸಲಾಗಿತ್ತು. ಶಿಬಿರಕ್ಕೆ ಶ್ರೀ ಅನಲೇಂದ್ರ ಶರ್ಮ, ಆರ್.ಓ.ಸಿ.(ಸ್ಕೌಟ್ಸ್), ಶ್ರೀ ಬಿ.ಕೆ. ಸಿಂಗ್, ಆರ್.ಓ.ಸಿ.(ಸ್ಕೌಟ್ಸ್), ಕುಮಾರಿ ಕೃತಿ ಚಾಂದವಾನಿ, ಆರ್.ಓ.ಸಿ.(ಗೈಡ್ಸ್) ಭೇಟಿ ನೀಡಿ ವಿವಿಧ ವಿಷಯಗಳ ಬಗ್ಗೆ ಉಪನ್ಯಾಸ ನೀಡಿದರು.

ದಿನಾಂಕ 26-10-2016 ರಂದು ಶ್ರೀ ಕೆ. ಗಂಗಪ್ಪಗೌಡ, ಸಹಾಯಕ ರಾಜ್ಯ ಆಯುಕ್ತರು (ಸ್ಕೌಟ್ಸ್), ಶ್ರೀ ಎಂ.ಎ. ಚೆಲ್ಲಯ್ಯ, ಸಂಚಾಲಕರು, ದೀನದಯಾಳು ನಾಯ್ಡು ಜನ್ಮ ಶತಮಾನೋತ್ಸವ ಸಮಿತಿ, ಇವರು ಮುಕ್ತಾಯ ಸಮಾರಂಭದಲ್ಲಿ ಅತಿಥಿಗಳಾಗಿ ಆಗಮಿಸಿ ಶಿಬಿರಾರ್ಥಿಗಳಿಗೆ ತಾವು ಕಲಿತ ತರಬೇತಿಯನ್ನು ಸ್ಕೌಟ್ಸ್-ಗೈಡ್ಸ್‌ಗಳಿಗೆ ತರಬೇತಿ ನೀಡುವುದರ ಮುಖಾಂತರ ಸ್ಕೌಟಿಂಗ್ ಗುಣಾತ್ಮಕ ಶಿಕ್ಷಣವನ್ನು ನೀಡಲು ಮುಂದಾಗುವಂತೆ ತಿಳಿಸಿದರು.

ದಿನಾಂಕ 27-10-2106 ರಂದು ಬೆಳಗ್ಗೆ 7 ಗಂಟೆಗೆ ಸರ್ವಧರ್ಮ ಪ್ರಾರ್ಥನೆಯನ್ನು ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಏರ್ಪಡಿಸಲಾಗಿತ್ತು.

# ಸಂಸ್ಥಾಪನಾ ದಿನಾಚರಣೆ : ಧ್ವಜ ಚೀಟಿ ಬಿಡುಗಡೆ ಕಾರ್ಯಕ್ರಮ

ದಿನಾಂಕ 07.11.2016 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಧ್ವಜ ಚೀಟಿಗಳ ಬಿಡುಗಡೆ ಸಮಾರಂಭವನ್ನು ಗೌರವಾನ್ವಿತ ರಾಜ್ಯಪಾಲರೂ ಮತ್ತು ಕರ್ನಾಟಕ ರಾಜ್ಯ ಸಂಸ್ಥೆಯ ಪೋಷಕರೂ ಆದ ಶ್ರೀ ವಾಜುಬಾಯಿ ರೂಡಾಬಾಯಿ ವಾಲಾ ಅವರು ರಾಜಭವನದಲ್ಲಿ ನಡೆಸಿಕೊಟ್ಟರು.

ಶ್ರೀ ಆರ್.ವಿ. ದೇಶಪಾಂಡೆ, ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಮೂಲ ಸೌಲಭ್ಯ ಅಭಿವೃದ್ಧಿ ಸಚಿವರು, ಕರ್ನಾಟಕ ಸರ್ಕಾರ, ಶ್ರೀ ಕೆ.ಜೆ.ಜಾರ್ಜ್, ಮಾನ್ಯ ಬೆಂಗಳೂರು ಅಭಿವೃದ್ಧಿ ಮತ್ತು ನಗರ ಯೋಜನಾ ಸಮಿತಿ ಸಚಿವರು, ಕರ್ನಾಟಕ ಸರ್ಕಾರ ಇವರುಗಳು ವಿಧಾನ ಸೌಧದಲ್ಲಿ ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.



ಶ್ರೀ ಎಂ.ಆನಂದ್, ಉಪಮಹಾಪೌರರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಶ್ರೀ ಆರ್.ಎಸ್. ಸತ್ಯನಾರಾಯಣ ಆಡಳಿತ ಪಕ್ಷದ ನಾಯಕರು, ಶ್ರೀ ಎಂ. ಆನಂದ್ ಜನತಾದಳ ಪಕ್ಷದ ನಾಯಕರು, ಇವರುಗಳು ಮಹಾನಗರ ಪಾಲಿಕೆ ಕಛೇರಿಯಲ್ಲಿ ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.



ಶ್ರೀ ಎಸ್.ವಿ.ರಂಗನಾಥ್, ಭಾ.ಆ.ಸೇ., ಸರ್ಕಾರದ ಮುಖ್ಯ ಕಾರ್ಯದರ್ಶಿಗಳು(ನಿ), ಶ್ರೀ ಡಿ.ವಿ.ಪ್ರಸಾದ್, ಅಪರ ಮುಖ್ಯ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕ, ಶ್ರೀ ಸುಭಾಷ್ ಚಂದ್ರ ಕುಂಟಿಯ, ಭಾ.ಆ.ಸೇ., ಮುಖ್ಯ ಕಾರ್ಯದರ್ಶಿ,



ಕರ್ನಾಟಕ ಸರ್ಕಾರ, ಶ್ರೀ ಐ.ಎಸ್.ಎನ್ ಪ್ರಸಾದ್, ಭಾ.ಆ.ಸೇ., ಅಪರ ಮುಖ್ಯ ಕಾರ್ಯದರ್ಶಿಗಳು ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ, ಶ್ರೀಮತಿ ಕೆ. ರತ್ನಪ್ರಭ, ಭಾ.ಆ.ಸೇ., ಅಪರ ಮುಖ್ಯ ಕಾರ್ಯದರ್ಶಿಗಳು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಕರ್ನಾಟಕ ಸರ್ಕಾರ, ಶ್ರೀ ಓಂಪ್ರಕಾಶ್ ಭಾ.ಪೋ.ಸೇ., ಡೈರೆಕ್ಟರ್ ಜನರಲ್ ಆಫ್ ಪೋಲೀಸ್, ಕರ್ನಾಟಕ ಸರ್ಕಾರ ಹಾಗೂ ಶ್ರೀ ಎಂ.ಎನ್. ರೆಡ್ಡಿ ಐ.ಪಿ.ಎಸ್. ಭಾ.ಪೋ.ಸೇ., ಡೈರೆಕ್ಟರ್ ಜನರಲ್ ಆಫ್ ಪೋಲೀಸ್, ಹೋಮ್ ಗಾರ್ಡ್ ಮತ್ತು ಫೈಯರ್ ಸರ್ವೀಸ್, ಕರ್ನಾಟಕ ಸರ್ಕಾರ, ಶ್ರೀ ಪಿ.ಸಿ.ಜಾಫರ್ ಭಾ.ಆ.ಸೇ., ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ, ಶ್ರೀ ಕೆ.ಆನಂದ ನಿರ್ದೇಶಕರು, ಪ್ರಾಥಮಿಕ ಶಿಕ್ಷಣ, ಶ್ರೀಮತಿ ಫಿಲೋಮಿನಾ ಲೋಬೊ, ನಿರ್ದೇಶಕರು, ಪ್ರೌಢ ಶಿಕ್ಷಣ, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರುಗಳು ತಮ್ಮ ಕಛೇರಿಗಳಲ್ಲಿ ಧ್ವಜ ಚೀಟಿಗಳನ್ನು ಬಿಡುಗಡೆ ಮಾಡಿದರು.





**ಮೇಲ್ಕಂಡ ಎಲ್ಲಾ ಕಾರ್ಯಕ್ರಮಗಳನ್ನು ನಿರ್ವಹಿಸಲು ಕೆಳಕಂಡಂತೆ ತಂಡಗಳನ್ನು ರಚಿಸಲಾಗಿತ್ತು.**

ಶ್ರೀ ಪಿ.ಜಿ.ಆರ್.ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರ ನೇತೃತ್ವದಲ್ಲಿ, ಶ್ರೀ ಮೋಹನ್ ಕೊಂಡಜ್ಜಿ, ಕೇಂದ್ರ ಸ್ಥಾನಿಕ ಆಯುಕ್ತರು, ಶ್ರೀ ಅನಿಲ್ ಕುಮಾರ್ ಕೇಂದ್ರ ಸ್ಥಾನಿಕ ಆಯುಕ್ತರು ಮತ್ತು ಶ್ರೀಮತಿ ಕೃಪಾವಿಜಯ.

ಶ್ರೀ ಕೊಂಡಜ್ಜಿ. ಬ.ಷಣ್ಮುಖಪ್ಪ, ಉಪಾಧ್ಯಕ್ಷರು, ಕರ್ನಾಟಕ ರಾಜ್ಯ ಸಂಸ್ಥೆ ಇವರ ನೇತೃತ್ವದಲ್ಲಿ, ಶ್ರೀ ಎನ್. ಶ್ರೀನಿವಾಸನ್, ರಾಜ್ಯ ಸ್ಥಾನಿಕ ಆಯುಕ್ತರು, ಶ್ರೀಮತಿ ಪಿ. ಸರೋಜ, ಜಿಲ್ಲಾ ಮುಖ್ಯ ಆಯುಕ್ತರು, ಬೆಂಗಳೂರು ಉತ್ತರ ಜಿಲ್ಲೆ,

ಶ್ರೀಮತಿ ಬಿ.ವಿ.ರಾಮಲತ, ಸಹಾಯಕ ರಾಜ್ಯ ಆಯುಕ್ತರು, ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸ್ಥಾನಿಕ ಆಯುಕ್ತರು.

ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು(ಸ್ಕೌಟ್ಸ್) ಇವರ ನೇತೃತ್ವದಲ್ಲಿ, ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು(ಗೈಡ್ಸ್), ಶ್ರೀ ವಿನ್ಸೆಂಟ್ ಜಾಕೋಬ್, ಸಹಾಯಕ ರಾಜ್ಯ ಆಯುಕ್ತರು, ಶ್ರೀಮತಿ ರಾಧಾ ವೆಂಕಟೇಶ್, ಸಹಾಯಕ ರಾಜ್ಯ ಅಯುಕ್ತರು, ಕುಮಾರಿ ಮೇಘನಾ.ಎಸ್, ಬೆಳವಾಡಿ ಅಧ್ಯಕ್ಷರು, ಯುವಸಮಿತಿ.

ಶ್ರೀ ಪ್ರಭುದೇವ. ಜೆ. ಚಿಗಟೇರಿ, ರಾಜ್ಯ ಕೋಶಾಧಿಕಾರಿ ಇವರ ನೇತೃದಲ್ಲಿ, ಡಾ.ಬಿ.ಎಲ್ ಭಾಗ್ಯಲಕ್ಷ್ಮಿ, ಸಹಾಯಕ ರಾಜ್ಯ ಆಯುಕ್ತರು, ಶ್ರೀಮತಿ ಎನ್.ಕೆ.ಛಾಯ, ರಾಜ್ಯ ಸ್ಥಾನಿಕ ಆಯುಕ್ತರು.

ಶ್ರೀ ಎಂ.ಎ.ಚೆಲ್ಲಯ್ಯ, ಸಂಪರ್ಕಾಧಿಕಾರಿ ಇವರ ನೇತೃತ್ವದಲ್ಲಿ, ಶ್ರೀಮತಿ ಎಸ್.ಕೆ. ಪ್ರಭ, ಜಂಟಿ ರಾಜ್ಯ ಕಾರ್ಯದರ್ಶಿ(ಗೈಡ್ಸ್), ಶ್ರೀಮತಿ ಬಿ.ಡಿ.ಶಾಂತ, ಸಹಾಯಕ ರಾಜ್ಯ ಆಯುಕ್ತರು(ಗೈಡ್ಸ್)

ಈ ಮೇಲ್ಕಂಡ ತಂಡಗಳೊಂದಿಗೆ ಸ್ಕೌಟ್ಸ್– ಗೈಡ್ಸ್, ರೋವರ್ಸ್ ಮತ್ತು ರೇಂಜರ್‌ಗಳೂ ಸಹ ಭಾಗವಹಿಸಿದ್ದರು.

## ರಾಜ್ಯ ಪುರಸ್ಕಾರ ಸ್ಕೌಟ್ಸ್/ಗೈಡ್ಸ್/ರೋವರ್ಸ್/ರೇಂಜರ್ಸ್‌ಗಳಿಗೆ ಪೂರ್ವಸಿದ್ಧತಾ ತರಬೇತಿ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ದಿನಾಂಕ 11 ರಿಂದ 15 ನವೆಂಬರ್ 2016ರವರೆಗೆ ರಾಜ್ಯ ಮಟ್ಟದ ರಾಜ್ಯಪುರಸ್ಕಾರ ಪೂರ್ವ ಸಿದ್ಧತಾ ಶಿಬಿರವನ್ನು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್/ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕ್, ದಾವಣಗೆರೆ ಜಿಲ್ಲೆಯಲ್ಲಿ ಆಯೋಜಿಸಲಾಗಿತ್ತು.

ಸದರಿ ಶಿಬಿರಕ್ಕೆ ಸ್ಕೌಟ್ ವಿಭಾಗಕ್ಕೆ 18 ಜಿಲ್ಲೆಗಳಿಂದ 330 ಸ್ಕೌಟ್ಸ್ ಮತ್ತು ರೋವರ್ಸ್‌ಗಳು ಮತ್ತು ಗೈಡ್ ವಿಭಾಗಕ್ಕೆ 245 ಗೈಡ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸಿದ್ದರು. ಶ್ರೀ. ಶೇಖರ್, ಎ.ಎಲ್.ಟಿ(ಸ್ಕೌ) ಇವರು ಸ್ಕೌಟ್ ವಿಭಾಗಕ್ಕೆ ಹಾಗೂ ಶ್ರೀ ಬಾಲಕೃಷ್ಣ ನಾಯ್ಡು ಇವರು ರೋವರ್ ವಿಭಾಗಕ್ಕೆ ನಾಯಕರಾಗಿದ್ದರು. ಶ್ರೀಮತಿ ಮೈಥಿಲಿ ರಾವ್, ಹೆಚ್‌ಡಬ್ಲ್ಯೂಬಿ ಇವರು ಗೈಡ್ ವಿಭಾಗಕ್ಕೆ ಹಾಗೂ ಶ್ರೀಮತಿ ಬಿ.ವಿ. ರಾಮಲತಾ, ಹೆಚ್‌ಡಬ್ಲ್ಯೂಬಿ ಇವರು ರೇಂಜರ್ ವಿಭಾಗಕ್ಕೆ ನಾಯಕಿಯಾಗಿದ್ದರು. ಇವರಿಗೆ ಸಹ ನಾಯಕ/ನಾಯಕಿಯರಾಗಿ ಶ್ರೀ ಎಂ.ಆರ್. ಪಾಟೀಲ್, ಶ್ರೀ ಯತೀಶ್, ಶ್ರೀ ಭರತ್ ರಾಜ್, ಶ್ರೀ ವಿಠಲ್ ಎಸ್. ಬಜಗುಂಡಿ, ಶ್ರೀಮತಿ ವಜ್ರಗಂಗಮ್ಮ, ಶ್ರೀಮತಿ ಕಲ್ಲಮ್ಮ, ಶ್ರೀಮತಿ ಕಾತ್ಯಾಯಿನಿ. ಸಿ.ಎಸ್., ಶ್ರೀ ನ್ಯಾಸಿ ಡಿಸೋಜಾ, ಶ್ರೀಮತಿ ಸುಮನ್ ಶೇಖರ್, ಶ್ರೀಮತಿ ನಾಗರತ್ನ ಪಾಟೀಲ್ ಮುಂತಾದವರುಗಳು ಶಿಬಿರಾರ್ಥಿಗಳಿಗೆ ಪಾಠ ಪ್ರವಚನಗಳನ್ನು ಬೋಧಿಸಿದರು.

ದಿನಾಂಕ 11.11.2016ರಂದು ಸಂಜೆ 4.30ಕ್ಕೆ ಶಿಬಿರದ ಉದ್ಘಾಟನೆಯನ್ನು ಶ್ರೀಮತಿ ಉಮಾ ರಮೇಶ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್, ದಾವಣಗೆರೆ ಇವರು ನೆರವೇರಿಸಿದರು. ಸದರಿ ಸಮಾರಂಭದಲ್ಲಿ ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಜಿಲ್ಲಾ ಗೈಡ್ ಆಯುಕ್ತರು, ದಾವಣಗೆರೆ, ಶ್ರೀ ಎ.ಪಿ. ಷಡಕ್ಷರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರು, ದಾವಣಗೆರೆ ಇವರು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

ದಿನಾಂಕ 14.11.2016ರಂದು ಮಕ್ಕಳ ದಿನಾಚರಣೆ ಮತ್ತು ಕೊಂಡಜ್ಜಿ ಬಸಪ್ಪನವರ 34ನೇ ಪುಣ್ಯ ಸ್ಮರಣೆ ಹಾಗು ಸದರಿ ಶಿಬಿರದ ಸಮಾರೋಪ ಸಮಾರಂಭವನ್ನು ಆಯೋಜಿಸಲಾಯಿತು. ಈ ಕಾರ್ಯಕ್ರಮದಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ನೆರವೇರಿಸಲಾಯಿತು. ಡಾ. ಗೊ.ರು.ಚನ್ನಬಸಪ್ಪ, ಅಧ್ಯಕ್ಷರು, ಪ್ರಕಟಣಾ ಸಮಿತಿ, ರಾಜ್ಯ ವಾರ್ತಾ ಪತ್ರ, ಬೆಂಗಳೂರು ಇವರು ಕೊಂಡಜ್ಜಿ ಬಸಪ್ಪನವರನ್ನು ಕುರಿತು ಮಾತನಾಡಿದರು.



ಶ್ರೀ ಜಿ.ಎಂ. ಸಿದ್ದೇಶ್ವರ್, ಮಾನ್ಯ ಲೋಕಸಭಾ ಸದಸ್ಯರು, ದಾವಣಗೆರೆ ಕ್ಷೇತ್ರ, ದಾವಣಗೆರೆ ಇವರು ಮಾತನಾಡಿ ಮಕ್ಕಳ ದಿನಾಚರಣೆ ಶುಭಾಷಯಗಳನ್ನು ಕೋರಿ ಕರ್ನಾಟಕದಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್ ಅಭಿವೃದ್ಧಿಗೆ ಕೊಂಡಜ್ಜಿ ಬಸಪ್ಪನವರ ಪಾತ್ರವನ್ನು ಸ್ಮರಿಸಿದರು.

ಶ್ರೀ ಹೆಚ್.ಎಸ್. ಶಿವಶಂಕರ್, ಮಾನ್ಯ ಶಾಸಕರು, ಹರಿಹರ ಕ್ಷೇತ್ರ, ಹರಿಹರ ಇವರು ಮಾತನಾಡುತ್ತಾ ಪ್ರಸಕ್ತ ದಿನಗಳಲ್ಲಿ ಮಕ್ಕಳಿಗೆ ಅವಶ್ಯವಿರುವ ದೈನಂದಿನ ಜೀವನದ ಮಹತ್ವವನ್ನು ತಿಳಿಸಿ ಶಿಬಿರದ ಯಶಸ್ವಿಗೆ ಅಭಿನಂದಿಸಿದರು.

ಶ್ರೀ ಬಿ.ಬಿ. ಕಲಿವಾಳ್, ಉಪಕುಲಪತಿಗಳು, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ ಇವರು ಸಮಾರೋಪ ಭಾಷಣವನ್ನು ಮಾಡುತ್ತಾ ಪ್ರಕೃತಿ ರಕ್ಷಣೆ, ಸೌರಶಕ್ತಿ, ಸ್ವಚ್ಛತೆ, ಮನೆ-ಸಮಾಜದಲ್ಲಿ ಮಕ್ಕಳ ಪಾತ್ರ ಮುಂತಾದ ವಿಷಯಗಳ ಬಗ್ಗೆ ಮಾತನಾಡಿದರು.



ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಅಧ್ಯಕ್ಷೀಯ ನುಡಿಯಲ್ಲಿ ಕೊಂಡಜ್ಜಿ ಬಸಪ್ಪನವರ ಸಾಧನೆ, ಮಕ್ಕಳ ದಿನಾಚರಣೆ-ಗಾಗಿ ನೆಹರೂರವರನ್ನು ಕುರಿತು, ಮುಂಬರುವ ರಾಜ್ಯದ ಮುಖ್ಯ ಕಾರ್ಯಕ್ರಮ-ಗಳ ಬಗ್ಗೆ ಹಾಗೂ ಮಕ್ಕಳ ಬೆಳವಣಿಗೆ ಕುರಿತು ಅತ್ಯುತ್ತಮವಾದ ಭಾಷಣವನ್ನು ನೀಡಿದರು.

ವೇದಿಕೆಯಲ್ಲಿ ಶ್ರೀ ಜಯಪ್ರಕಾಶ್ ಜೆ. ಚಿಗಟೇರಿ, ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ, ದಾವಣಗೆರೆ, ಶ್ರೀಮತಿ ವಿಶಾಲಕ್ಷ ಮ್ಮ, ಅಧ್ಯಕ್ಷರು, ಗ್ರಾಮ ಪಂಚಾಯತ್, ಕೊಂಡಜ್ಜಿ, ಶ್ರೀಮತಿ ಪ್ರೇಮ ಪರಮೇಶ್ವರಪ್ಪ, ಸದಸ್ಯರು, ತಾಲ್ಲೂಕ್ ಪಂಚಾಯತ್, ಶ್ರೀ ಕೆ.ಬಿ. ಗುರುಮೂರ್ತಿ, ಜಿಲ್ಲಾ ಖಜಾಂಜಿ, ಮೈಸೂರು, ಶ್ರೀ ಮೋಹನ್ ಕೊಂಡಜ್ಜಿ, ಕೇಂದ್ರ ಸ್ಥಾನಿಕ ಆಯುಕ್ತರು, ಕೊಂಡಜ್ಜಿ ಕುಟುಂಬದ ಸದಸ್ಯರು, ದಾವಣಗೆರೆ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ಕೊಂಡಜ್ಜಿ ಗ್ರಾಮಸ್ಥರು, ಮರುಳ ಸಿದ್ದೇಶ್ವರ ಭಜನಾ ಮಂಡಳಿ ಸದಸ್ಯರು ಮುಂತಾದವರು ಉಪಸ್ಥಿತರಿದ್ದರು.

ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ರಾಜ್ಯ ಸಂಸ್ಥೆ, ಬೆಂಗಳೂರು ಇವರು ಸಂಸ್ಥೆಯ ಅಭಿವೃದ್ಧಿ, ತರಬೇತಿ ಶಿಬಿರ ಕೇಂದ್ರದ ಅಭಿವೃದ್ಧಿ, ಮಕ್ಕಳಿಗೆ ಉತ್ತಮ ಗುಣಗಳನ್ನು ತಿಳಿಸುತ್ತಾ ಸರ್ವರಿಗೂ ವಂದನೆಗಳನ್ನು ಸಮರ್ಪಿಸಿದರು.

ಸದರಿ ಶಿಬಿರ ಸಂಪೂರ್ಣ ಉಸ್ತುವಾರಿಯನ್ನು ಶ್ರೀಮತಿ. ಸಿ. ಮಂಜುಳಾ, ರಾಜ್ಯ ಸಂಘಟನಾ ಆಯುಕ್ತರು(ಗೈ) ಇವರು ಯಶಸ್ವಿಯಾಗಿ ವಹಿಸಿದ್ದರು.

# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ದಿನಾಂಕ 02-10-2016 ರಂದು ಜಿಲ್ಲಾ ಸಂಸ್ಥೆಯಲ್ಲಿ ಮಹಾತ್ಮಾ ಗಾಂಧೀಜಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರಿಯವರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಈ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು. ನಂತರ ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ರಾಮ್ ಪ್ರಸಾದ್ ಮನೋಹರ ಇವರ ನೇತೃತ್ವದಲ್ಲಿ ರೈಲ್ವೆ ನಿಲ್ದಾನದಲ್ಲಿ (ದಿನಾಂಕ 01-10-1921 ರಲ್ಲಿ ಶ್ರೀ ಮಹಾತ್ಮ ಗಾಂಧೀಜಿಯವರು ಈ ನಿಲ್ದಾಣದಲ್ಲಿ ಎಂಟು ಗಂಟೆ (8) ಗಳ ಕಾಲ ತಂಗಿದ್ದರು) ಗಾಂಧೀಜಿ ಫೋಟೋಗೆ ಪೂಜೆಯನ್ನು ಮಾನ್ಯ ಮಾಜಿ ಸಚಿವರಾದ ಶ್ರೀ ಅಲ್ಲಂ ವೀರಭದ್ರಪ್ಪನವರು ಪೂಜೆ ಸಲ್ಲಿಸಿದರು. ಸರ್ವಧರ್ಮ ಪ್ರಾರ್ಥನೆ ಮಾಡಲಾಯಿತು. ನಂತರ ಮಾನ್ಯ ಜಿಲ್ಲಾಧಿಕಾರಿಗಳು ಸ್ವಚ್ಛ ಭಾರತ ಕಾರ್ಯಕ್ರಮದ ಪ್ರತಿಜ್ಞೆಯನ್ನು ಸರ್ವರಿಗೂ ಬೋಧಿಸಿದರು.

ನಂತರ ಬಳ್ಳಾರಿಯ ಪ್ರಮುಖ ಬೀದಿಗಳ ಸ್ವಚ್ಛತೆಯನ್ನು ಕೈಗೊಳ್ಳಲಾಯಿತು. ರೈಲ್ವೇ ನಿಲ್ದಾಣ, ಮೋತಿ ಸರ್ಕಲ್, ಬಸವೇಶ್ವರ ವೃತ್ತ, ಕಾಳಮ್ಮ ಬೀದಿಗಳಲ್ಲಿ ನಡೆದ ಸ್ವಚ್ಛತಾ ಕಾರ್ಯಕ್ರಮಗಳಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಗೂ ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರು ಶ್ರೀ ಎಂ.ಟಿ. ಮಲ್ಲೇಶ್ ಹಾಗೂ ಇತರರು ಉಪಸ್ಥಿತರಿದ್ದರು.

* ನವೆಂಬರ್ 07 ರಿಂದ 14ರ ವರೆಗೆ ಧ್ವಜ ದಿನಾಚರಣೆಯನ್ನು ಜಿಲ್ಲಾ ಸಂಸ್ಥೆಯಲ್ಲಿ ಆಚರಿಸಲಾಯಿತು. ಈ ಕಾರ್ಯಕ್ರಮವನ್ನು ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ವಿಜಯ ಸಿಂಹರವರು ಉದ್ಘಾಟಿಸಿದರು. ಈ ದಿನಾಚರಣೆಯ ಮಹತ್ವವನ್ನು ಅವರು ತಿಳಿಸಿದರು, ನಂತರ ಸೈಕಲ್ ಜಾಥಾ, ಹೊರ ಸಂಚಾರ ಅನಾಥಾಶ್ರಮಗಳಿಗೆ ಭೇಟಿ ಮುಂತಾದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು.

* ಸ್ಥಳೀಯ ಸರಳಾದೇವಿ ಸರಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಜಿಲ್ಲಾ ಮಟ್ಟದ ರೋವರ್ಸ್ ಮತ್ತು ರೇಂಜರ್ಸ್ ನಿಪುಣ್ ತರಬೇತಿ ಮತ್ತು ಪರೀಕ್ಷಾ ಶಿಬಿರವನ್ನು ಇತ್ತೀಚೆಗೆ ಹಮ್ಮಿಕೊಳ್ಳಲಾಗಿತ್ತು.

ಪ್ರಾಚಾರ್ಯ ಪ್ರೊ. ಯು. ಅಬ್ದುಲ್ ಮುತಾಲಿಬ್ ಶಿಬಿರಕ್ಕೆ ಚಾಲನೆ ನೀಡಿ ಮಾತನಾಡಿ, ವಿದ್ಯಾರ್ಥಿಗಳಲ್ಲಿ ಶಿಸ್ತು ಮತ್ತು ಸಮಯಪಾಲನೆ ಬೆಳೆಸುವಲ್ಲಿ ರೋವರ್ಸ್ ಮತ್ತು ರೇಂಜರ್ಸ್ ಚಟುವಟಿಕೆಗಳು ಹೆಚ್ಚಿನ ಆದ್ಯತೆ ನೀಡುತ್ತವೆ ಎಂದು ಹೇಳಿದರು. ಶಿಬಿರದಲ್ಲಿ ಉತ್ತಮವಾದ ತರಬೇತಿ ಪಡೆದು ರಾಜ್ಯ ಮತ್ತು ರಾಷ್ಟ್ರಮಟ್ಟದ ಪರೀಕ್ಷೆಗಳಲ್ಲಿ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಯಶಸ್ಸುಗಳಿಸಬೇಕು ಎಂದರು. ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಆಯುಕ್ತ ಶ್ರೀ ಎಂ. ನಾಗರಾಜ, ಮುಖಂಡರಾದ ಶ್ರೀ ಎಂ. ಗಣಪತಿ, ಶ್ರೀ ಎಂ.ಕೆ. ರಂಗಸ್ವಾಮಿ ತರಬೇತಿ ನೀಡಿದರು.

ಇದೆ ಶಿಬಿರದಲ್ಲಿ ರೇಂಜರ್ಸ್ ನಾಯಕಿ ಶ್ರೀಮತಿ ಶೋಭಾರಾಣಿ, ರೋವರ್ಸ್ ನಾಯಕರಾದ ಶ್ರೀ ಕೆ.ಎನ್. ರಾಮಾಂಜನೇಯ, ಡಾ. ವೀರರಾಘವುಲು, ಗ್ರಂಥಪಾಲಕ ಡಾ. ಕೆಂಗಲ್ ಗೋಪಾಲರೆಡ್ಡಿ ಇತರರಿದ್ದರು. ಇದೇ ವೇಳೆ ಏಕಲವ್ಯ ಸಂಘದ ಅಧ್ಯಕ್ಷ ಶ್ರೀ ಎಸ್. ಸಂತೋಷ್‌ರವರು ಉಚಿತವಾಗಿ ನೀಡಿದ ಬ್ಯಾಗ್‌ಗಳನ್ನು ಶಿಬಿರಾರ್ಥಿಗಳಿಗೆ ವಿತರಿಸಲಾಯಿತು.

## Bengaluru North

Malleshwaram Local Association conducted the following camps in the Premises of Sri Chamundi Scout Group Malleshwaram, Bengaluru on 3rd to 4th Nov 2016.

| Sl. No | Camp | Leader |
|---|---|---|
| 1 | Testing Camp for Rajat Punk Bulbuls & Dwitiya Charan cubs | Smt. Pushpa for Bulbul Section |
| 2 | Preparatory Camp for Survana Punk Bulbuls & Tritiya Charan Cubs | Sri Venkatesh for Cub Section |
| 3. | Testing Camp for Dwitiya Sopan Scouts and Guides | Sri Raju for Scout Section |
| 4. | Preparatory Camp for Tritiya Sopan Scouts and Guides | Smt. Jyothi for Guide Section |
| 5. | Ambulance Man Badge Workshop | Sri K. Narasimhamurty |

Sri. Jayasimha, Paramedic and Faculty of St.John's Ambulance was the Advisor for Ambulance man Badge Work Shop, Smt.B.V.Ramalatha was the overall incharge of all the camps. Smt Geetha Nataraj, State Commissioner(Guides) Miss.Meghana. S, Belawadi, Chairperson Youth Committee, Sri B.K.Sheshadri, Secretary, Bengaluru North, Smt.Badmaja, District Training Commissioner(Guides) and Smt.Vanitha Narayan, District Commissioner(Guides) visited the camps.

## Bengaluru South

### OBSERVANCE OF FLAG DAY

As a Part of the Centenary Celebration of V.P.Deenadayalu Naidu, Former Mayor of Bangalore, the Former State Chief Commissioner and Former National Commissioner, Bengaluru South District Association of the Bharat Scouts and Guides, observed a Rally and the Flag Day on $7^{th}$ Nov 2016 at Akhila Karnataka Makkala Koota, Bengaluru. Nearly 1000 Cubs, BulBuls, Scouts, Guides, Rovers, Rangers along with their Unit Leaders participated in the Event.



Smt. G. Padmavathi, Worshipful Mayor of Bengaluru paid a floral tribute to the photo of V.P.Deenadayalu Naidu and released the Foundation Day Flag and she has promised to extend all the Support to the Movement.

Sr P.G.R. Sindhia, State Chief Commissioner presided over the Function. In his address he Congratulated the District for its all round activities for the benefit of the Scouts and Guides and the good number of participation of Scouts and Guides at the Flag Day Rally.



Smt Kokhila Chandrasekhar, Councellor, Chamrajpet, Sri Mohan Kumar, Smt. Radha Venkatesh Nominated Councellers, Sri M.K.Khan, District Chief Commissioner, Sri P.Palani and Uma Nagesh, District Commissioner Scouts and Guides were present.

Earlier Sri M.A. Chellaiah, Nodal officer(Scouts and Guides) for BBMP Schools and Colleges received the Mayor along with the District Officials. Sri M.S.Satheesh, District Secretary welcomed the Guest and the gathering and Sri N.Anand, Treasurer proposed the vote of thanks.

## PATROL LEADERS AND SIXERS TRAINING CAMP

As a Part of the Centenary Celebration of V.P.Deenadayalu Naidu, Former Mayor of Bangalore the Former State Chief Commissioner and Former National Commissioner , The Bengaluru South District Association of the Bharat Scouts and Guides, organized **PATROL LEADERS AND SIXERS** Training Camp from 11th to 15th November 2016 at Dr. Annie Besant Scouts and Guides State Training and Camping Centre, Doddaballapur 258 Scouts 190 Guides, 52 Cubs, 48 BulBuls, and 48 Staff Members participated in the Training Camp.

The Leadership Qualities, Patrol System, Duties and Responsibilities of the Patrol Leaders. The Camp was inaugurated by Sri N.Anand, Treasurer.

The Valedictory Function was held on 14 November 2016 and Children's Day was observed. Dr M.R. Lakshminarayana, Principal, BES Teachers College, Bengaluru, Sri. M.K.Khan, District Chief Commissioner, Sri. M.A. Chellaiah, Nodal officer(Scouts and Guides) for BBMP Schools and Colleges addressed the Participants.

Sri. T.K. Narayanaswamy, District Training Commissioner was the Camp Director. Sri M.S.Satheesh, District Secretary and. A.S.Madhusudhan Co-ordinated the Training Camp.

| | | | |
|---|---|---|---|
| 1) | ತನ್ನೊಳಗೆ ನಗುವವನು | – | ಜ್ಞಾನಿ |
| 2) | ತನ್ನ ಗೆಳೆಯ/ಗೆಳತಿ/ಯನನ್ನು ನೆನೆದು ನಗುವವನು/ಳು | – | ಪ್ರೇಮಿ |
| 3) | ತಾನೆ ನಗುವವನು | – | ಹುಚ್ಚ |
| 4) | ಮೈ ಮರೆತು ನಗುವವನು | – | ರಸಿಕ |
| 5) | ಇನ್ನೊಬ್ಬರಿಗಾಗಿ ನಗುವವನು | – | ಅಯೋಗ್ಯ |
| 6) | ಇನ್ನೊಬ್ಬರನ್ನು ನೋಡಿ ನಗುವವನು | – | ಗರ್ವಿ |
| 7) | ಇನ್ನೊಬ್ಬರಿಗೆ ನೋವಾಗುವಂತೆ ನಗುವವನು | – | ಖಳನಾಯಕ |
| 8) | ನಕ್ಕು ಮನರಂಜನೆ ನೀಡುವವನು | – | ವಿದೂಷಕ |
| 9) | ನಗುತ್ತಲೇ ವಿಜಯ ಸಾಧಿಸುವವನು | – | ಬುದ್ಧಿವಂತ |
| 10) | ಗೆದ್ದರೂ ನಗದವನು | – | ಕರ್ಮಯೋಗಿ |

ಇದರೊಳಗೆ ನೀನು ಯಾರು ?

ಸಂಗ್ರಹ : ವಿ.ಅ. ಸಾತಪುತೆ, ಆರ್.ಎಸ್.ಎಲ್

## ಬೆಳಗಾವಿ

ದಿನಾಂಕ 21-09-2016 ರಂದು ಮಾನ್ಯ ಜಿಲ್ಲಾಧಿಕಾರಿಗಳ ಕಾರ್ಯಾಲಯದ ಸಭಾಂಗಣದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿಯ 2015-16ನೇ ಸಾಲಿನ ವಾರ್ಷಿಕ "ಸರ್ವ ಸಾಮಾನ್ಯ ಸಭೆ" ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಹಾಗೂ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಅರ್. ಸಿಂಧ್ಯರವರ ಉಪಸ್ಥಿತಿಯಲ್ಲಿ ಜರುಗಿತು. ಸದರಿ ಸಭೆಯಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲೆಯ ಎಲ್ಲ ಕ್ಷೇತ್ರ ಶಿಕ್ಷಣಾಧಿಕಾರಿಗಳು, ದೈಹಿಕ ಶಿಕ್ಷಣ ಪರಿವೀಕ್ಷಕರುಗಳು ಭಾಗವಹಿಸಿದ್ದರು.

* ದಿನಾಂಕ 24-09-2016 ರಂದು ನಗರದ ಜ್ಯೋತಿ ಪದವಿ ಪೂರ್ವ ಮಹಾವಿದ್ಯಾಲಯದಲ್ಲಿ ರೋವರ್-ರೇಂಜರ್ ಘಟಕಗಳ ಉದ್ಘಾಟನಾ ಸಮಾರಂಭವು ಜರುಗಿತು. ಸಮಾರಂಭದ ಅಧ್ಯಕ್ಷತೆಯನ್ನು ಕಾಲೇಜಿನ ಪ್ರಾಂಶುಪಾಲರಾದ ಡಾ|| ಎಸ್.ಎಂ. ಚೆಂಡತೆ ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ. ಶ್ರೀ ವಿಠ್ಠಲ್ ಎಸ್.ಬಿ. ಮತ್ತು ಶ್ರೀ ಡಿ.ಬಿ. ಅತ್ತಾರ, ಆಗಮಿಸಿದ್ದರು. ವಿಶೇಷ ಆಹ್ವಾನಿತರಾಗಿ ಶ್ರೀ ಎಸ್.ಎಲ್.ಎಂ. ಪಾಟೀಲ ಉಪಸ್ಥಿತರಿದ್ದರು. ಆರ್.ಎಸ್.ಎಲ್. ಶ್ರೀ ಸಿ.ಜಿ. ಬಿರಾದಾರ ಆರ್.ಎಲ್., ಡಾ|| ಎಂ.ಎಸ್.ಬಾಗಿ ಹಾಗು 100 ಕ್ಕೂ ಹೆಚ್ಚು ವಿದ್ಯಾರ್ಥಿ/ವಿದ್ಯಾರ್ಥಿನಿಯರು ಭಾಗವಹಿಸಿದ್ದರು.

* ದಿನಾಂಕ 02-10-2016 ರಂದು "ರಾಷ್ಟ್ರಪಿತ" ಮಹಾತ್ಮಾ ಗಾಂಧೀಜಿಯವರ ಜಯಂತಿಯನ್ನು ಆಚರಿಸಲಾಯಿತು. ಈ ಆಚರಣೆಯಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳೆಲ್ಲರೂ ಭಾಗವಹಿಸಿದ್ದರು. ಗಾಂಧೀಜಿಯವರ ಭಾವಚಿತ್ರಕ್ಕೆ ಜಿಲ್ಲಾ ಮುಖ್ಯ ಆಯುಕ್ತರು ಪೂಜೆಯನ್ನು ಸಲ್ಲಿಸಿದರು. ನಂತರ ಕೆ.ಎಲ್.ಪಿ.ಎಸ್. ನಂ. 120 ಟಿಳಕವಾಡಿಯ ಕಬ್ ಬುಲ್-ಬುಲ್‌ಗಳು ಕಛೇರಿಯ ಆವರಣವನ್ನು "ಸ್ವಚ್ಛ"ಗೊಳಿಸಿದರು. ಸ್ವಚ್ಛತಾ ಕಾರ್ಯದಲ್ಲಿ ಜಿಲ್ಲಾ ಕಾರ್ಯದರ್ಶಿಗಳು ಸ್ಕೌಟ್-ಗೈಡ್‌ಗಳೊಂದಿಗೆ ಪಾಲ್ಗೊಂಡರು ನಂತರ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸಿಹಿ ಹಂಚಲಾಯಿತು.

ಇದೇ ದಿನ ಗೋಕಾಕದ ಕೆ.ಎಲ್.ಇ. ಶಾಲೆಯಲ್ಲಿ ಸ್ಕೌಟ್-ಗೈಡ್‌ಗಳು ಸರ್ವಧರ್ಮ ಪ್ರಾರ್ಥನೆಯನ್ನು ಮುಗಿಸಿ ನಗರದ ವಿವಿಧ ಬೀದಿಗಳಲ್ಲಿ ಸ್ವಚ್ಛತಾ ಕಾರ್ಯದಲ್ಲಿ ಸ್ಕೌಟರ್-ಗೈಡರ್‌ಗಳೊಂದಿಗೆ ಪಾಲ್ಗೊಂಡರು. ನಿಪ್ಪಾಣಿ ವಲಯದ ಶ್ರೀ ಪೆವಾಡಿ ಸ.ಮ.ಹಿ.ಪ್ರಾ. ಶಾಲೆಯ ಮಕ್ಕಳು ಶಾಲೆಯ ಆವರಣವನ್ನು ಸ್ವಚ್ಛಗೊಳಿಸಿದರು. ಇವರೊಂದಿಗೆ ಸ್ಕೌಟರ್-ಗೈಡರ್‌ಗಳು ಕೂಡ ಪಾಲ್ಗೊಂಡಿದ್ದರು.

* ದಿನಾಂಕ 15-10-2016 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಮಹರ್ಷಿ ವಾಲ್ಮೀಕಿ ಜಯಂತಿಯನ್ನು ಆಚರಿಸಲಾಯಿತು. ಆಚರಣೆಯಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.



## ಚಾಮರಾಜನಗರ

ದಿನಾಂಕ 19-11-2016 ರಂದು ಬಯಲು ಬಹಿರ್ದೆಸ ಮುಕ್ತ ವಿಶ್ವ ಶೌಚಾಲಯ ದಿನಾಚರಣೆಯನ್ನು ಚಾಮರಾಜನಗರದ ತಾಲ್ಲೂಕು ಉಮ್ಮತ್ತೂರು ಗ್ರಾಮದಲ್ಲಿ ಜಿಲ್ಲಾ/ತಾಲ್ಲೂಕು/ಗ್ರಾಮ ಪಂಚಾಯಿತಿ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಚಾಮರಾಜನಗರ ಜಿಲ್ಲಾ ಸಂಸ್ಥೆ ಸಂಯುಕ್ತಾಶ್ರಯದಲ್ಲಿ ನಡೆಸಲಾಯಿತು.

ಜಿಲ್ಲಾ ಪಂಚಾಯಿತಿ ಅಧಿಕಾರಿ ಸ್ವಾಗತ ಮಾಡಿದರು. ಉದ್ಘಾಟನೆ ಮತ್ತು ಪ್ರತಿಜ್ಞಾ ವಿಧಿಯನ್ನು ಸನ್ಮಾನ್ಯ ಶ್ರೀ ದೃವ ನಾರಾಯಣ್, ಲೋಕಸಭಾ ಸದಸ್ಯರು ಬೋಧಿಸಿದರು. ಬಯಲು ಬಹಿರ್ದೆಸ ಮುಕ್ತದ ಬಗ್ಗೆ ಅರಿವು ಮೂಡಿಸಲು ಗ್ರಾಮದ ಪ್ರಮುಖ ಬೀದಿಗಳಲ್ಲಿ ಜಾಥಾ ಕಾರ್ಯಕ್ರಮ ನಡೆಸಲಾಯಿತು.

ಸನ್ಮಾನ್ಯ ಶ್ರೀ ದೃವನಾರಾಯಣ್, ಲೋಕಸಭಾ ಸದಸ್ಯರು, ಚಂದ್ರು, ತಾಲ್ಲೂಕು ಪಂಚಾಯಿತಿ ಅಧ್ಯಕ್ಷರು, ಸನ್ಮಾನ್ಯ ಶ್ರೀ ರಾಮು, ಜಿಲ್ಲಾಧಿಕಾರಿಗಳು ಸನ್ಮಾನ್ಯ ಹೆಪ್ಸಿಬಾ ರಾಣಿ ಕೊರ್ಲಪಾಟಿ ಜಿಲ್ಲಾ ಪಂಚಾಯಿತಿ ಮುಖ್ಯ



ಕಾರ್ಯನಿರ್ವಾಹಕಾಧಿಕಾರಿ, ಮತ್ತು ಅಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಚಾಮರಾಜನಗರ, ಶ್ರೀಮತಿ ಮಂಜುಳ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ, ಚಾಮರಾಜನಗರ ಇನ್ನಿತರ ಇಲಾಖಾ ಪ್ರಮುಖ ಅಧಿಕಾರಿಗಳವರಿಂದ ಒಂದೊಂದು ಶೌಚಾಲಯಕ್ಕೆ ಗುದ್ದಲಿ ಪೂಜೆ ನೆರವೇರಿಸಿಲಾಯಿತು. ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು.

### ಚಿತ್ರದುರ್ಗ



ಚಿತ್ರದುರ್ಗ ಜಿಲ್ಲೆಯ 6 ತಾಲ್ಲೂಕುಗಳಿಂದ 500 ಸ್ಕೌಟ್ಸ್-ಗೈಡ್ಸ್ 45, ಸ್ಕೌಟರ್ಸ್-ಗೈಡರ್ಸ್‌ಗಳು, ಕರ್ನಾಟಕ ದರ್ಶನ ಪ್ರವಾಸದಲ್ಲಿ ಭಾಗವಹಿಸಿದ್ದರು. ಕಳಸ, ಧರ್ಮಸ್ಥಳ, ಸುಬ್ರಮಣ್ಯ, ಭಾಗಮಂಡಲ, ತಲಕಾವೇರಿ, ಅಬ್ಬಿಫಾಲ್ಸ್, ಕೊಡಗು, ಕುಶಾಲನಗರ, ಗೋಲ್ಡನ್ ಟೆಂಪಲ್, ನಂಜನಗೂಡು, ಚಾಮುಂಡಿ ಬೆಟ್ಟ, ಮೈಸೂರು ಅರಮನೆ, ಮೃಗಾಲಯ, ಶ್ರೀರಂಗಪಟ್ಟಣ, ಶ್ರವಣಬೆಳಗೊಳ, ಬೇಲೂರು, ಹಳೇಬೀಡು ಸ್ಥಳಗಳಿಗೆ ಭೇಟಿ ನೀಡಲಾಯಿತು. ಈ ನಂತರ ಮಕ್ಕಳಿಗೆ ಪ್ರೋತ್ಸಾಹಕವಾಗಿ ಪ್ರಶಸ್ತಿಗಳು, ಬಹುಮಾನಗಳನ್ನು ನೀಡಲಾಯಿತು.

* ದಿನಾಂಕ 01-11-2016 ರಂದು ಚಿತ್ರದುರ್ಗದಲ್ಲಿ ಹಮ್ಮಿಕೊಂಡಿದ್ದ ಕನ್ನಡ ರಾಜ್ಯೋತ್ಸವ ಸಮಾರಂಭದಲ್ಲಿ ವಿವಿಧ ಸ್ತಬ್ಧ ಚಿತ್ರಗಳನ್ನೊಳಗೊಂಡ ಜಾಥ ನಗರದ ಪ್ರಮುಖ ಬೀದಿಗಳಲ್ಲಿ ನಡೆಸಲಾಯಿತು. ಭಾರತ್ ಸ್ಕೌಟ್ಸ್-ಗೈಡ್ಸ್ ವತಿಯಿಂದ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳು, ನಿಯಮಗಳು, ಪ್ರತಿಜ್ಞೆ, ಮಕ್ಕಳ ಪ್ರಗತಿಪರ ಶಿಕ್ಷಣ ಮುಂತಾದ ಅಂಶಗಳನ್ನೊಳಗೊಂಡ ಸ್ತಬ್ಧ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಸುಮಾರು 100 ಸ್ಕೌಟ್ಸ್-ಗೈಡ್ಸ್‌ಗಳು ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಈ ಕಾರ್ಯಕ್ರಮವು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಆವರಣದಲ್ಲಿ ಆಯೋಜನೆಗೊಂಡಿದ್ದು, ಜಿಲ್ಲಾಡಳಿತವು ಜಿಲ್ಲೆಯ 10 ಗಣ್ಯರಲ್ಲಿ ಸ್ಕೌಟ್ಸ್ ಗೈಡ್ಸ್‌ನ ಆಯುಕ್ತರಾದ ಶ್ರೀಯುತ ಪಿ.ಎಲ್. ಸುರೇಶ್ ರಾಜು ಜಿಲ್ಲಾ ಆಯುಕ್ತರು (ಸ್ಕೌಟ್ಸ್) ರವರಿಗೆ ಕನ್ನಡ ರಾಜ್ಯೋತ್ಸವ ಜಿಲ್ಲಾ ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು.



ಜಿಲ್ಲಾ ಉಸ್ತುವಾರಿ ಸಚಿವ ಮಾನ್ಯ ಶ್ರೀ ಹೆಚ್. ಆಂಜನೇಯ, ಮಾನ್ಯ ಶಾಸಕರಾದ ಶ್ರೀ ಜಿ.ಹೆಚ್. ತಿಪ್ಪಾರೆಡ್ಡಿ, ಎಂ.ಎಲ್.ಸಿ., ಶ್ರೀಮತಿ ಜಯಮ್ಮ, ಜಿ. ಪಂ. ಅಧ್ಯಕ್ಷೆ, ಶ್ರೀಮತಿ ಸೌಭಾಗ್ಯ ಬಸವರಾಜನ್, ನಗರಸಭೆ ಅಧ್ಯಕ್ಷ ಶ್ರೀ ಮಂಜುನಾಥ ಗೊಪ್ಪೆ, ರೈತ ಮುಖಂಡ ಶ್ರೀ ಕೆ.ಪಿ. ಭೂತಯ್ಯ, ಶ್ರೀ ಹೆಚ್. ವಿಶ್ವನಾಥ, ಶ್ರೀ ವಿ. ಚಂದ್ರಪ್ಪ, ಶ್ರೀ ಎಂ.ಕೆ. ಶ್ರೀರಂಗಯ್ಯ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ, ಶ್ರೀ ಅರುಣ್ ರಂಗರಾಜನ್, ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ, ಶ್ರೀ ನಿತೀಶ್ ಪಾಟೀಲ್ ಸಿ.ಇ.ಓ. ಜಿ.ಪಂ.

ಚಿತ್ರದುರ್ಗ, ಶ್ರೀ ಎಂ. ರೇವಣಸಿದ್ಧಪ್ಪ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಶ್ರೀಮತಿ ರೀನಾ ವೀರಭದ್ರಪ್ಪ ಜಿಲ್ಲಾ ಜಂಟಿ ಕಾರ್ಯದರ್ಶಿ, ಶ್ರೀ ಸಿ.ಎನ್. ಮಹೇಶ್ ಡಿ.ಟಿ.ಸಿ.(ಎಸ್.) ಇತರೆ ಜಿಲ್ಲಾ ಪದಾಧಿಕಾರಿಗಳು ಹಾಗೂ ಜಿಲ್ಲೆಯ ಎಲ್ಲಾ ಇಲಾಖೆ ಅಧಿಕಾರಿಗಳು ಭಾಗವಹಿಸಿದ್ದರು.

* ದಿನಾಂಕ 03-11-2016 ರಂದು ಚಳ್ಳಕೆರೆ ತಾಲ್ಲೂಕು ಸ್ಥಳೀಯ ಸಂಸ್ಥೆ ವತಿಯಿಂದ ಸ್ಕೌಟರ್ಸ್-ಗೈಡರ್ಸ್‌ಗಳಿಗೆ ಒಂದು ದಿನದ ಪುನಃಶ್ಚೇತನ ಕಾರ್ಯಗಾರವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಗಾರದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎಂ.ಆರ್. ನಾರಾಯಣಪ್ಪ, ಹಿಂದಿನ ಜಿಲ್ಲಾ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಉಪಾಧ್ಯಕ್ಷರು ಸ್ಥಳೀಯ ಸಂಸ್ಥೆ, ಚಳ್ಳಕೆರೆ, ಶ್ರೀ ಸ್ವಾಮಿ ವಿವೇಕಾನಂದ ಶಾಲೆ ಆಡಳಿತಾಧಿಕಾರಿ ವಹಿಸಿದ್ದರು. ಉದ್ಘಾಟನೆಯನ್ನು ಶ್ರೀ ಪಿ.ಎಲ್. ಸುರೇಶ ರಾಜು ಜಿಲ್ಲಾ ಆಯುಕ್ತರು (ಸ್ಕೌಟ್ಸ್) ರವರು ನೆರವೇರಿಸಿದರು.

* ದಿನಾಂಕ 08-11-2016 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯಲ್ಲಿ ಸಂಸ್ಥಾಪನಾ ದಿನಾಚರಣೆ ಪ್ರಯುಕ್ತ (ಧ್ವಜ ದಿನಾಚರಣೆ) ನಗರದ ಪ್ರಮುಖ ಬೀದಿಗಳಲ್ಲಿ ಸೈಕಲ್ ಜಾಥಾ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಪಿ.ಎಲ್. ಸುರೇಶ್ ರಾಜ್, ಜಿಲ್ಲಾ ಆಯುಕ್ತರು(ಸ್ಕೌಟ್)ರವರು ವಹಿಸಿ ಸಭೆಯನ್ನುದ್ದೇಶಿಸಿ ಮಾತನಾಡುತ್ತಾ "ವ್ಯಕ್ತಿ ವೀರಭದ್ರನಾದರೆ, ಊರು ಸುಭದ್ರವಾಗುತ್ತದೆ. ವ್ಯಕ್ತಿ ಶಕುನಿಯಾದರೆ, ಊರು ಮಹಾಭಾರತವಾಗುತ್ತದೆ. ಆದ್ದರಿಂದ ಪ್ರತಿಯೊಬ್ಬರು ಸ್ಕೌಟ್ಸ್-ಗೈಡ್ಸ್‌ಗಳು ವೀರಭದ್ರರಾಗಿ ಊರನ್ನು ಸುಭದ್ರವಾಗಿಸಬೇಕೆಂದು ಹಾಗೂ ಸರ್ವರಿಗೂ ಸಹಾಯ ಮಾಡುವ ಗುಣವನ್ನು ಬೆಳೆಸಿಕೊಂಡು ಸತ್ಪ್ರಜೆಗಳು ಆಗಬೇಕೆಂದು ಕರೆ ನೀಡಿದರು. ಸನ್ಮಾನ್ಯ ಶ್ರೀ ಬಿ. ಕಾಂತರಾಜು ಮಾಜಿ ನಗರಸಭೆ ಅಧ್ಯಕ್ಷರು ಕಾರ್ಯಕ್ರಮವನ್ನು ಉದ್ಘಾಟಿಸಿ ಮತ್ತು ಧ್ವಜ ಚೀಟಿಗಳನ್ನು ಬಿಡುಗಡೆಗೊಳಿಸಿ "ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಶಿಸ್ತುಬದ್ಧವಾದ ಸಂಸ್ಥೆಯಾಗಿದ್ದು ಈ ಸಂಸ್ಥೆಗೆ ವಿದ್ಯಾರ್ಥಿಗಳು ಸೇರಿ ಶಿಸ್ತುಬದ್ಧತೆಯನ್ನು ಮೈಗೂಡಿಸಿಕೊಳ್ಳಬೇಕು" ಎಂದು ನುಡಿದರು ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿ ರೀನಾ ವೀರಭದ್ರಪ್ಪ ಸ್ವಾಗತಿಸಿದರು ಹಾಗೂ ಶ್ರೀ ರೇವಣ್ಣ ಎ.ಡಿ.ಸಿ., (ಸ್ಕೌಟ್ಸ್) ವಂದನಾರ್ಪಣೆ ಸಲ್ಲಿಸಿದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಗೂ ಶ್ರೀ ವಾಸವಿ ವಿದ್ಯಾಸಂಸ್ಥೆ, ರೋಟರಿ ವಿದ್ಯಾಲಯ ಹಾಗೂ ಸಂತ ಜೋಸೆಫರ ಶಾಲೆಯ ಮಕ್ಕಳು ಹಾಗೂ ಶಿಕ್ಷಕರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಸೈಕಲ್ ಜಾಥಾವನ್ನು ಶ್ರೀ ಪಿ.ಎಲ್. ಸುರೇಶ ರಾಜು ಜಿಲ್ಲಾ ಆಯುಕ್ತರು ಸ್ಕೌಟ್ಸ್ ರವರು ಉದ್ಘಾಟಿಸಿದರು.

## ದಕ್ಷಿಣ ಕನ್ನಡ

ದಿನಾಂಕ 01-11-2016 ರಂದು ಜಿಲ್ಲಾ ಮಟ್ಟದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮವು ನಗರದ ನೆಹರೂ ಮೈದಾನದಲ್ಲಿ ಜರುಗಿತು. ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ರಮಾನಾಥ ರೈಯವರು ಧ್ವಜಾರೋಹಣ ಗೈದು ಮಾತನಾಡಿದರು. ಪಥಸಂಚಲನ ಕಾರ್ಯಕ್ರಮದಲ್ಲಿ ವ್ಯಾಸಮಹರ್ಷಿ ವಿದ್ಯಾಪೀಠ, ಕಿಲ್ಪಾಡಿ, ಮುಲ್ಕಿಯಿಂದ 25 ಸ್ಕೌಟ್ಸ್, 19 ಗೈಡ್ಸ್, 2 ಶಿಕ್ಷಕರು ಭಾಗವಹಿಸಿದ್ದರು.

* ದಿನಾಂಕ 01-11-2016 ರಂದು ಬುರೂಜ್ ಶಿಕ್ಷಣ ಸಂಸ್ಥೆಯ ವತಿಯಿಂದ ಕನ್ನಡ ರಾಜ್ಯೋತ್ಸವವನ್ನು ಆಚರಿಸಲಾಯಿತು. ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಜಾರ್ಜ್ ಕೆ.ಎಫ್. ಧ್ವಜಾರೋಹಣ ನೆರವೇರಿಸಿದರು. ಶಾಲಾ ಸಂಚಾಲಕರಾದ ಜನಾಬ್ ಶೇಕ್ ರೆಹ್ಮತ್ತುಲ್ಲಾ ಕರ್ನಾಟಕ ರಾಜ್ಯದ ಉದಯದ ಬಗ್ಗೆ ವಿವರಿಸಿದರು. ಶಾಲಾ ಸಹ ಶಿಕ್ಷಕಿಯರಾದ ಕು. ಶೋಭಾ ಮತ್ತು ಕು. ಮಹಾಲಕ್ಷ್ಮಿ ನಮ್ಮ ನಾಡಿನ ಚರಿತ್ರೆಯನ್ನು ವಿವರಿಸಿದರು. ಸ್ಕೌಟ್ಸ್-ಗೈಡ್ಸ್‌ಗಳಿಂದ ಭಾಷಣ ದೇಶಭಕ್ತಿ ಗೀತೆ ಮತ್ತು ನಾಡಗೀತೆ ಇತ್ಯಾದಿ ಕಾರ್ಯಕ್ರಮಗಳು ನಡೆದವು. 9ನೇ ತರಗತಿಯ ಕು॥ ಗೌತಮಿ ಕಾರ್ಯಕ್ರಮ ನಿರೂಪಿಸಿದರು. ಕು॥ ಆಕೃತಿ ಸ್ವಾಗತಿಸಿ, ಕು॥ ಸುನೈನಾ ಧನ್ಯವಾದವಿತ್ತರು. ವೇದಿಕೆಯಲ್ಲಿ ಎಲ್ಲಾ ಶಿಕ್ಷಕ-ಶಿಕ್ಷಕಿಯರು, ಶಿಕ್ಷಕೇತರ ವೃಂದದವರು ಉಪಸ್ಥಿತರಿದ್ದರು.

ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಪಂಜ ಹಾಗೂ ವಿದ್ಯಾಬೋಧಿನೀ ಹಿರಿಯ ಪ್ರಾಥಮಿಕ ಶಾಲೆ, ಬಾಳಿಲ ಇವುಗಳ ಸಹಯೋಗದಲ್ಲಿ ಪಂಜ ಸ್ಥಳೀಯ ಸಂಸ್ಥೆಯು ಕನ್ನಡ ರಾಜ್ಯೋತ್ಸವವನ್ನು ಬಾಳಿಲ ವಿದ್ಯಾಬೋಧಿನೀ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಹಮ್ಮಿಕೊಂಡಿತ್ತು. ಇದೇ ಸಂದರ್ಭದಲ್ಲಿ ಪಟಾಲಂ ನಾಯಕರ ತರಬೇತಿ ಶಿಬಿರ ಹಾಗೂ ಕಬ್-ಬುಲ್‌ಬುಲ್‌ಗಳ ನಾಯಕರ ತರಬೇತಿ ಶಿಬಿರಗಳು ನಡೆದವು

ಬಾಳಿಲ ಪ್ರಾಥಮಿಕ ಶಾಲಾ ಸಂಚಾಲಕರಾದ ಶ್ರೀ ಆರ್. ಚಂದ್ರರಾವ್ ಅಧ್ಯಕ್ಷತೆ ವಹಿಸಿದ್ದರು. ತಾಲೂಕು ಪಂಚಾಯತ್ ಅಧ್ಯಕ್ಷರಾದ ಶ್ರೀ ಚನಿಯ ಕಲ್ತಡ್ಕರು ಧ್ವಜಾರೋಹಣಗೈದರು ಹಾಗೂ ಶಿಬಿರಗಳನ್ನು ಉದ್ಘಾಟಿಸಿದರು. ಸುಳ್ಯ ವಿಧಾನಸಭಾ ಶಾಸಕರಾದ ಶ್ರೀ ಎಸ್. ಅಂಗಾರ, ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ಎಸ್.ಎನ್. ಮನ್ಮಥ, ತಾಲೂಕು ಪಂಚಾಯತ್ ಸದಸ್ಯರಾದ ಶ್ರೀಮತಿ ಜಾನ್ನವಿ ಕಾಂಚೋಡು, ಬಾಳಿಲ ನಾಗರಿಕ ಸೇವಾ ಸಮಿತಿಯ ಗೌರವಾಧ್ಯಕ್ಷ ಶ್ರೀ ಪಿ.ಜಿ.ಎಸ್.ಎನ್. ಪ್ರಸಾದ್, ಪ್ರೌಢಶಾಲಾ ಆಡಳಿತ ಮಂಡಳಿಯ ಸಂಚಾಲಕರಾದ ಶ್ರೀ ವೆಂಕಟ್ರಮಣ ಭಟ್, ಶ್ರೀಮತಿ ವಿಮಲಾ ರಂಗಯ್ಯ, ಶ್ರೀ ದೇವಿಪ್ರಸಾದ್ ಜಾಕೆ ಉಪಸ್ಥಿತರಿದ್ದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ವಾಸುದೇವ ನಡ್ಕ ಸ್ವಾಗತಿಸಿ, ಪ್ರಾಥಮಿಕ ಶಾಲಾ ಮುಖ್ಯಗುರು ಶ್ರೀ ವೈ.ಬಿ. ಸುಬ್ಬಯ್ಯ ವಂದಿಸಿದರು. ಸ್ಥಳೀಯ ಸಂಸ್ತೆಯ ಕಾರ್ಯದರ್ಶಿ ಶ್ರೀ ಎಸ್. ಉದಯಕುಮಾರ್ ರೈ ಕಾರ್ಯಕ್ರಮ ನಿರೂಪಿಸಿದರು.

ರಾತ್ರಿ ನಡೆದ ಶಿಬಿರಾಗ್ನಿಯನ್ನು ಬಾಳಿಲ ಗ್ರಾಮ ಪಂಚಾಯತ್ ಸದಸ್ಯರಾದ ಶ್ರೀಮತಿ ಜಯಕುಮಾರಿ ದೇವಸ್ಯ ಉದ್ಘಾಟಿಸಿದರು.

* ದಿನಾಂಕ 02-11-2016ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ದಕ್ಷಿಣ ಕನ್ನಡಕ್ಕೆ ರಾಜ್ಯ ಸಂಸ್ಥೆಯಿಂದ ರಾಜ್ಯ ತಂಡ ಭೇಟಿ ನೀಡಿತು.

ರಾಜ್ಯ ಸಂಸ್ಥೆಯ ರಾಜ್ಯ ಕೋಶಾಧಿಕಾರಿ ಶ್ರೀ ಪ್ರಭುದೇವ ಜೆ. ಚಿಗಟೇರಿ, ಶ್ರೀಮತಿ ರಾಧ ವೆಂಕಟೇಶ್ ಎಸ್.ಎಸ್.ಸಿ. (ಗೈ) ಹಾಗೂ ಕುಮಾರಿ ಮೇಘನಾ ಬೆಳವಾಡಿ ಯುವ ಸಮಿತಿಯ ಅಧ್ಯಕ್ಷರು ಈ ತಂಡದಲ್ಲಿದ್ದರು. ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲಾ ಸಂಸ್ಥೆಯ ವಿವಿಧ ಯೋಜನೆಗಳು, 2015-16ನೇ ಸಾಲಿನ ಕಾರ್ಯಕ್ರಮ ಹಾಗೂ ವಿವಿಧ ವಿಷಯಗಳ ಬಗ್ಗೆ ಪರಿಶೀಲನೆಯನ್ನು ಮಾಡಿದರು.

* ದಿನಾಂಕ 06-10-2016 ರಂದು ವಿಟ್ಲ ಸ್ಥಳೀಯ ಸಂಸ್ಥೆಯ ಪಟಾಲಂ ನಾಯಕರ ತರಬೇತಿ ಹಾಗೂ ಪದಕಾರ್ಜನ ತರಬೇತಿ ಶಿಬಿರವು ಸ.ಹಿ.ಪ್ರಾ.ಶಾಲೆ ಚಂದಳಿಕೆ ಇಲ್ಲಿ ನಡೆಯಿತು. ಶಿಬಿರದ ನೇತೃತ್ವವನ್ನು ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ ಚಂದಳಿಕೆ ಶಾಲೆ ಮತ್ತು ವಿದ್ಯಾವರ್ಧಕ ಸಂಘ ಚಂದಳಿಕೆ ಶಾಲೆ ವಹಿಸಿಕೊಂಡಿದ್ದವು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ವಿಶ್ವನಾಥ್ ಗೌಡ ಸ್ವಾಗತಿಸಿ ಪ್ರಸ್ತಾವನೆ ಗೈದರು. ಶ್ರೀಮತಿ ಪುಷ್ಪಾ, ಮುಖ್ಯೋಪಾಧ್ಯಾಯಿನಿ ವಂದಿಸಿದರು. ಶಾಲಾ ಶಿಕ್ಷಕ ಶ್ರೀ ಚಂದ್ರಶೇಖರ್ ಕಾರ್ಯಕ್ರಮ ನಿರೂಪಿಸಿದರು.

* ದಿನಾಂಕ 02-11-2016 ಮತ್ತು 03-11-2016 ರಂದು ಭಿನ್ನ ಸಾಮರ್ಥ್ಯದ ಸ್ಕೌಟ್ಸ್-ಗೈಡ್ಸ್ ಮತ್ತು ಬುಲ್‌ಬುಲ್ಸ್ ಗಳ 2 ದಿನದ ಶಿಬಿರವನ್ನು ಆಗ್ನೇಸ್ ಸ್ಪೆಷಲ್ ಶಾಲೆಯ ಮೈದಾನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಶಿಬಿರಾಗ್ನಿಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಲಾಯಿತು. ಈ ಶಿಬಿರದಲ್ಲಿ ಸುಮಾರು 45 ಸ್ಕೌಟ್ಸ್-ಗೈಡ್ಸ್, ಮತ್ತು 35 ಕಬ್ಸ್-ಬುಲ್ ಬುಲ್ಸ್ ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಕದ್ರಿಯ ಸಂಚಾರಿ ಪೋಲಿಸ್ ವಲಯದ ಶ್ರೀ ಕೆ ಗವಾರ ಪಿ.ಎಸ್.ಐ. ಇವರ ನೇತೃತ್ವದಲ್ಲಿ ಶ್ರೀ ದಯಾನಂದ ಕಾನ್‌ಸ್ಟೇಬಲ್, ಇಮ್ತಿಯಾಸ್ ಸಿ.ಪಿ.ಸಿ. ಶ್ರೀಶೈಲ ಸಿ.ಪಿ.ಸಿ. ಇವರಿಂದ ಸಂಚಾರಿ ನಿಯಮ ಹಾಗೂ ಇಂಟರ್ ಸೆಕ್ಟರ್ ವಾಹನದ ಬಗ್ಗೆ ಮಕ್ಕಳಿಗೆ ಮಾಹಿತಿಯನ್ನು ನೀಡಲಾಯಿತು. ಸ್ಕೌಟ್ಸ್ ಮಾಸ್ಟರ್ ಶ್ರೀ ಪ್ರಕಾಶ್ ಡಿ'ಸೋಜರವರಿಂದ ನಿರ್ಮಿಸಲ್ಪಟ್ಟ ಸಾಹಸ ಕ್ರೀಡೆಗಳಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಜಿಲ್ಲಾ ಸಂಸ್ಥೆಯಲ್ಲಿ ಧ್ವಜ ದಿನಾಚರಣೆ, ಸಂಸ್ಥಾಪನ ದಿನಾಚರಣೆ ಹಾಗೂ ದಿ॥ ದೀನದಯಾಳು ನಾಯ್ಡುರವರ ಜನ್ಮ ಶತಮಾನೋತ್ಸವದ ಆಚರಣೆ ಹಮ್ಮಿಕೊಳ್ಳಲಾಗಿತ್ತು. ಈ ಸಂದರ್ಭದಲ್ಲಿ ಮಂಗಳೂರು ಸ್ಥಳೀಯ ಸಂಸ್ಥೆಯ ಅಮೃತ

ವಿದ್ಯಾಲಯ ಎಂ.ಜಿ.ಸಿ., ಸೈಂಟ್ ಆ್ಯನ್ಸ್, ನಲಂತ ಮತ್ತು ಸೈಂಟ್ ಅಲೋಶಿಯಸ್ ಶಾಲೆಗಳಿಂದ ಸುಮಾರು 225ಕ್ಕೂ ಹೆಚ್ಚಿನ ವಿದ್ಯಾರ್ಥಿಗಳು ಭಾಗವಹಿಸಿ, ಪರಿಸರ ನೈರ್ಮಲ್ಯದ ಬಗ್ಗೆ ಘೋಷಣೆಯನ್ನು ಕೂಗುತ್ತಾ ಸಾರ್ವಜನಿಕರಿಗೆ ಪರಿಸರ ಸ್ವಚ್ಛತೆಯ ಬಗ್ಗೆ ತಿಳುವಳಿಕೆ ನೀಡಿದರು. ಸಭಾ ಕಾರ್ಯಕ್ರಮದಲ್ಲಿ ಬೇಡನ್ ಪಾವೆಲ್‌ರ ಬಗ್ಗೆ ಶ್ರೀಮತಿ ಚಂದ್ರಕಲಾ ಎಸ್, ಜಿಲ್ಲಾ ಸಂಘಟನಾ ಆಯುಕ್ತೆ, ಮಾತನಾಡಿದರು. ಶ್ರೀ ಸಂತೋಷ್ ಎಂ.ಜಿ.ಸಿ., ಸ್ಕೌಟರ್, ಡಾ॥ ದೀನ್‌ದಯಾಳು ನಾಯ್ಡುರವರ ಸಾಧನೆ, ಕೊಡುಗೆ ಬಗ್ಗೆ ಮಾತನಾಡಿದರು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್, ಜಿಲ್ಲಾ ಕಾರ್ಯದರ್ಶಿ ಶ್ರೀ ಸಂತೋಷ್ ಕುಮಾರ್ ಕದ್ರಿ, ಸ್ಕೌಟ್ ಆಯುಕ್ತ, ಶ್ರೀ ರಾಮಶೇಷ ಶೆಟ್ಟಿ, ಗೈಡ್ ಆಯುಕ್ತೆ ಶ್ರೀಮತಿ ಐರಿನ್ ಡಿ'ಕುನ್ಹಾ ಕೋಶಾಧಿಕಾರಿ ಶ್ರೀ ವಾಸುದೇವ ಬೋಳೂರು ಮತ್ತು ಮ್ಯಾನೇಜರ್ ಶ್ರೀ ಭಾಸ್ಕರ್ ಉಪಸ್ಥಿತರಿದ್ದು ಧ್ವಜ ದಿನಾಚರಣೆಯ ಸ್ಟಿಕ್ಕರನ್ನು ಬಿಡುಗಡೆ ಮಾಡಿದರು.



* ಕರ್ನಾಟಕ ಪ್ರವಾಸೋಧ್ಯಮ ಇಲಾಖೆಯವರು ದ್ವಿತೀಯ ಬಾರಿಗೆ ಕರ್ನಾಟಕ ರಾಜ್ಯದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಕರ್ನಾಟಕ ದರ್ಶನ ಕಾರ್ಯಕ್ರಮಕ್ಕೆ ಅವಕಾಶ ನೀಡಿರುತ್ತಾರೆ. ಇದರಲ್ಲಿ ದ.ಕ. ಜಿಲ್ಲೆಯ 79 ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳು ಮತ್ತು ಇತರರು ಸೇರಿ ಒಟ್ಟು 450 ಮಂದಿ ಅವಕಾಶವನ್ನು ಪಡೆದುಕೊಂಡಿರುತ್ತಾರೆ. ಶ್ರೀ ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ರಾಮಶೇಷ ಶೆಟ್ಟಿ ಜಿಲ್ಲಾ ಆಯುಕ್ತರು (ಸ್ಕೌಟ್), ಶ್ರೀಮತಿ ಐರಿನ್ ಡಿ'ಕುನ್ಹ ಜಿಲ್ಲಾ ಆಯುಕ್ತರು (ಗೈಡ್), ಶ್ರೀ ವಾಸುದೇವ ಬೋಳೂರು ಜಿಲ್ಲಾ ಕೋಶಾಧಿಕಾರಿ ಮತ್ತು ಮ್ಯಾನೇಜರ್ ಶ್ರೀ ಭಾಸ್ಕರ್ ರವರು ಶುಭವನ್ನು ಕೋರಿ ಹಸಿರು ನಿಶಾನೆ ತೋರಿಸುವುದರ ಮೂಲಕ 8 ಬಸ್ಸುಗಳಿಗೆ ಚಾಲನೆ ನೀಡಿದರು. ಉಡುಪಿ, ಮರವಂತೆ ಬೀಚ್, ಮುರುಡೇಶ್ವರ, ಬನವಾಸಿ, ಸಿದ್ಧರೂಢಮಠ, ಬಾದಾಮಿ, ಐಹೊಳೆ, ಪಟ್ಟದಕಲ್ಲು, ಬನಶಂಕರಿ, ಮಹಾಕೂಟ, ಬಸವಣ್ಣನವರ ಐಕ್ಯಸ್ಥಳ, ಅನುಭವ ಮಂಟಪ, ಆಲಮಟ್ಟಿ ಡ್ಯಾಂ, ರಾಕ್ ಗಾರ್ಡನ್, ಗೋಲಗುಮ್ಮಟ (ವಿಜಯಪುರ), ಟಿ.ಬಿ. ಡ್ಯಾಂ, ಹಂಪೆ, ಚಿತ್ರದುರ್ಗ ಹಾಗೂ ಮುರುಘಮಠಕ್ಕೆ ಭೇಟಿಯನ್ನಿತ್ತು ಹಿಂತಿರುಗಿರುತ್ತಾರೆ.

## ಗದಗ

* ದಿನಾಂಕ 02-10-2016 ರಂದು ಗದಗ ಜಿಲ್ಲಾಡಳಿತ ಏರ್ಪಡಿಸಿದ್ದ ಗಾಂಧೀಜಯಂತಿ ಕಾರ್ಯಕ್ರಮದಲ್ಲಿ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ದಿನಾಂಕ 15-10-2016 ರಂದು ನಡೆದ ವಾಲ್ಮೀಕಿ ಜಯಂತಿಯಲ್ಲಿ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ದಿನಾಂಕ 27-10-2016 ರಂದು ಸ್ಪಂದನ ಕಿವುಡ-ಮೂಕರ ಶಾಲೆಯಲ್ಲಿ ನಡೆದ "ಕಿವುಡ-ಮೂಗ" ದಿನಾಚರಣೆಯಲ್ಲಿ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ದಿನಾಂಕ 20-10-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಸ್ವಚ್ಛತಾ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದಲ್ಲಿ ಅತಿಥಿಗಳಾಗಿ ಶ್ರೀ ಕುಂಟೋಜಿರಾವ್, ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು, ಶ್ರೀ ಕಿಲಬನ್ನವರ ಗದಗ ಸ್ಥಳೀಯ ಸಂಸ್ಥೆ ಉಪಾಧ್ಯಕ್ಷರು, ಶ್ರೀಮತಿ ಜಿ.ಜಿ. ಗೌಡರ ಭಾಗವಹಿಸಿದ್ದರು.

* ದಿನಾಂಕ 07-11-2016 ರಂದು ಜಿಲ್ಲಾ ಸಂಸ್ಥೆಯ ವತಿಯಿಂದ ಸಂಸ್ಥಾಪನ ದಿನಾಚರಣೆ ಹಾಗೂ ಧ್ವಜ ಚೀಟಿಗಳ ಬಿಡುಗಡೆ ಸಮಾರಂಭವನ್ನು ಆಚರಿಸಲಾಯಿತು. ಅಧ್ಯಕ್ಷತೆಯನ್ನು ಶ್ರೀಮತಿ ಸುಮಾ ಗರಗ, ಜಲ್ಲಾ ಆಯುಕ್ತರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ರುದ್ರಪ್ಪ ಡಿ.ಡಿ.ಪಿ.ಐ., ಶ್ರೀ ಜಿ.ಎಲ್. ಬಾರಟಕ್ಕಿ ಎಸ್.ಎಸ್.ಎ. / ಡಿ.ಡಿ.ಪಿ.ಐ., ಸಾರ್ವಜನಿಕ ಶಿಕ್ಷಣ ಇಲಾಖೆ, ಗದಗ, ಶ್ರೀ ಬಡಿಗೇರ ಪ್ರಾಂಶುಪಾಲರು ನಗರಸಭೆ ಪದವಿಪೂರ್ವ ಕಾಲೇಜು, ಇವರು ವಹಿಸಿದ್ದರು.

ಶ್ರೀ ರುದ್ರಪ್ಪ ರವರು ಮಾತನಾಡುತ್ತಾ ಈ ಮೇಲ್ಕಂಡ ಸಮಾರಂಭ ಹಾಗೂ ಧ್ವಜಚೀಟಿ ಬಿಡುಗಡೆ ಪ್ರತಿವರ್ಷ ನಡೆಯುತ್ತದೆ ಈ ಸಂಸ್ಥೆಗೆ ಅಡಿಪಾಯ ಹಾಕಿದವರನ್ನು ನೆನೆಸಿಕೊಳ್ಳುವುದೇ ಈ ಕಾರ್ಯಕ್ರಮದ ಉದ್ದೇಶ ಎಂದರು. ಶ್ರೀ ಜಿ.ಎಲ್. ಬಾರಟಕ್ಕಿ ಎಸ್.ಎಸ್.ಎ./ಡಿ.ಡಿ.ಪಿ.ಐ. ಮಾತನಾಡುತ್ತಾ ಈ ಸಮಾರಂಭದಲ್ಲಿ ಧ್ವಜಚೀಟಿ ಬಿಡುಗಡೆ ಅರ್ಥ ಜನರಲ್ಲಿ ಅರಿವು ಹಾಗೂ ದಳಗಳಿಗೆ ಧನಸಹಾಯವಾಗುತ್ತದೆ ಎಂದರು. ನಂತರ ಅಧ್ಯಕ್ಷತೆ ವಹಿಸಿದ ಶ್ರೀಮತಿ ಸುಮಾ ಗರಗ, ಜಿಲ್ಲಾ ಆಯುಕ್ತರು ಗೈಡ್ಸ್ ರವರು ಮಾತನಾಡುತ್ತಾ ಪ್ರತಿವರ್ಷ ಈ ಸಮಾರಂಭ+ ಧ್ವಜ ಚೀಟಿ ಬಿಡುಗಡೆ ಸಮಾರಂಭಕ್ಕೆ ಒಂದು ಅರ್ಥವಿದೆ. ಸಾರ್ವಜನಿಕರಿಗೆ ಅರಿವನ್ನು ಮೂಡಿಸುವ ಕಾರ್ಯಕ್ರಮ ಎಂದರು. ಈ ಕಾರ್ಯಕ್ರಮದಲ್ಲಿ ಶ್ರೀ ಜಿ.ಹೆಚ್. ಪೂಜಾರ ಜಿಲ್ಲಾ ಕಾರ್ಯದರ್ಶಿ, ಶ್ರೀ ಜಿ.ಜಿ. ಗೌಡರ, ಶ್ರೀ ಕಲಬನ್ನವರ ಉಪಾಧ್ಯಕ್ಷರು ಸ್ಥಳೀಯ ಸಂಸ್ಥೆ ಗದಗ, ಭಾಗವಹಿಸಿದ್ದರು.

## ಹಾವೇರಿ

ದಿನಾಂಕ 29-09-2016 ರಿಂದ 02-10-2016 ರ ವರೆಗೆ ಕಾಲೇಜ್‌ಗಳ ರೋವರ್ಸ್-ರೇಂಜರ್ಸ್‌ಗಳಿಗೆ ಕಬ್ಬೂರ್ ತಾಲ್ಲೂಕು ಹಾವೇರಿಯಲ್ಲಿ ನಿಪುಣ್ ಪರೀಕ್ಷಾ ಶಿಬಿರ ನಡೆಸಲಾಯಿತು. ಶಿಬಿರದ ನಾಯಕರಾಗಿ ಶ್ರೀ ಎನ್.ಡಿ. ತಮ್ಮಣ್ಣನವರ್ ಆಗಮಿಸಿದ್ದರು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀಮತಿ ಮಾಧುರಿ ದೇವಧರ ಜಿಲ್ಲಾ ಮುಖ್ಯ ಆಯುಕ್ತರು ನೆರವೇರಿಸಿದರು. ಶ್ರೀ ಆರ್.ಆರ್. ಕಾಶಪ್ಪನವರ ಜಿಲ್ಲಾ ಕಾರ್ಯದರ್ಶಿ ಮತ್ತು ಶ್ರೀ ಎಂ.ಎಂ. ಕೋಟೂರ ಜಿಲ್ಲಾ ಸ್ಥಾನಿಕ ಆಯುಕ್ತರು ಭಾಗವಹಿಸಿದ್ದರು. ಮುಕ್ತಾಯ ಸಮಾರಂಭದಲ್ಲಿ ಶ್ರೀ ಲಮಾಣಿ ಡಿ.ಎಸ್. ಅಧ್ಯಕ್ಷರು ಗ್ರಾ.ಪಂ. ಕಬ್ಬೂರ ಶ್ರೀ ಹಲಗಣ್ಣನವರ ಸದಸ್ಯರು ತಾ.ಪಂ. ಹಾವೇರಿ ರವರು ಭಾಗವಹಿಸಿದ್ದರು.

ಶಿಬಿರದಲ್ಲಿ 7 ಪ್ರಥಮ ದರ್ಜೆ ಕಾಲೇಜುಗಳಿಂದ 80 ರೋವರ್ಸ್, 60 ರೇಂಜರ್ಸ್ ಭಾಗವಹಿಸಿದ್ದರು.

* ದಿನಾಂಕ 02-10-2016 ರ ಗಾಂಧಿಜಯಂತಿ ಪ್ರಯುಕ್ತ ಸರ್ವಧರ್ಮ ಪ್ರಾರ್ಥನೆ ಹಮ್ಮಿಕೊಳ್ಳಲಾಗಿತ್ತು. ರೋವರ್ಸ್-ರೇಂಜರ್ಸ್ ರವರಿಂದ ಆಸ್ಪತ್ರೆ, ವಸತಿ ಶಾಲೆ ಪಂಚಾಯತ್ ಆವರಣ, ಬಸ್ ನಿಲ್ದಾಣದ ಆವರಣವನ್ನು ಸ್ವಚ್ಛಗೊಳಿಸಲಾಯಿತು ಹಾಗೂ ಕಬ್ಬೂರ ಗ್ರಾಮದಲ್ಲಿ ಪ್ರತಿಯೊಂದು ಮನೆಗೆ ಹೋಗಿ ಬಯಲು ಶೌಚಾಲಯ ತ್ಯಜಿಸಿ ಮನೆಗೊಂದು ಶೌಚಾಲಯ ಕಟ್ಟಿಸಿ, ಮನೆಗೊಂದು ಶೌಚಾಲಯ-ಊರಿಗೊಂದು ದೇವಾಲಯ ಎಂಬ ಸಂದೇಶವನ್ನು ತಿಳಿಸಲಾಯಿತು. ಕಾರ್ಯಕ್ರಮದಲ್ಲಿ ಉಪನ್ಯಾಸಕರಾದ ಶ್ರೀ ಬಿ.ಹೆಚ್. ಬ್ಯಾಡಗಿ ಶ್ರೀ ರವಿರಾಜ, ಶ್ರೀ ಹನುಮಂತರಾಜ, ಡಾ॥ ಕಣವಿ, ಡಾ॥ ಶಶಿಕಲಾ ಹಲಸೂರ ಶ್ರೀ ಎಂ.ಆರ್. ಪಾಟೀಲ ಡಿ.ಟಿ.ಸಿ., ಶ್ರೀ ಎ.ಎಲ್. ಸೂರಣಗಿ, ಡಿ.ಓ.ಸಿ., ಹಾಜರಿದ್ದರು.

## ಕಾರವಾರ



ಭವ್ಯ ಭಾರತದಲ್ಲಿ ಭಗವಾನ್ ಬುದ್ಧ, ಮಹಾತ್ಮ ಗಾಂಧಿಯಂತಹ ಮಹಾನ್ ಪುರುಷರು ಜನ್ಮತಾಳಿ ಶಾಂತಿ ಮಂತ್ರದಿಂದ ಮನುಕುಲಕ್ಕೆ ದಾರಿದೀಪವಾದರು. ಮದರ್ ತೆರೆಸಾ, ದಲಾಯ್‌ಲಾಮ ರವರಿಗೆ ನೊಬೆಲ್ ಶಾಂತಿ ಪ್ರಶಸ್ತಿ ಬಂದವು. ಅಲಿಪ್ತ ನೀತಿಯ ಮುಖಾಂತರ ಜಗತ್ತಿಗೆ ಶಾಂತಿಯನ್ನು ನೀಡಿದ ನಮ್ಮ ದೇಶ ಭಾರತವೆಂಬುದು ಹೆಮ್ಮೆಯೆನಿಸುತ್ತದೆ ಎಂದು ಉತ್ತರ ಕನ್ನಡ ಜಿಲ್ಲೆಯ ಪ್ರೊಬೇಷನರಿ ಜಿಲ್ಲಾಧಿಕಾರಿಗಳಾದ ಮಾನ್ಯ ಪೌಜಿಯಾ ತರುನ್ನಮ್ ರವರು ಅಭಿಪ್ರಾಯ ವ್ಯಕ್ತಪಡಿಸಿದರು. ಅವರು ಶಿವಾಜಿ ವಿದ್ಯಾಮಂದಿರ. ಅಸ್ನೋಟಿ (ಕಾರವಾರ)ಯಲ್ಲಿ, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಕಾರವಾರ ವತಿಯಿಂದ ಆಯೋಜನೆಗೊಂಡಿದ್ದ ವಿಶ್ವಶಾಂತಿ ದಿನಾಚರಣೆ ಉದ್ಘಾಟಿಸಿ ಮಾತನಾಡುತ್ತಿದ್ದರು.

ಮುಖ್ಯ ಅತಿಥಿಗಳಾಗಿದ್ದ ಶ್ರೀ ದಿನೇಶ್ ಗಾಂವಕರ ಮಾತನಾಡಿದರು. ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆಯ ಅಧ್ಯಕ್ಷ ಶ್ರೀ ಸಂಜಯ ಸಾಳೊಂಕೆ ರವರು ವಹಿಸಿದ್ದರು. ಎ.ಎಸ್.ಓ.ಸಿ. (ಸ್ಕೌಟ್) ಶ್ರೀ ನಾಗೇಶ್ ಆರ್. ಶಿವಪುರ ಶ್ರೀ ಮಹಾದೇವರಾಣೆ, ಶ್ರೀ ಆರ್.ಕೆ. ದುರ್ಗೇಕರ ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಗಣೇಶ್ ಬಿಷ್ಟನ್ನವರ ಸ್ವಾಗತಿಸಿ. ನಿರೂಪಿಸಿದರು ಶ್ರೀ ಮನ್ಸುರ ಮುಲ್ಲಾ, ಹಿಮಾಲಯ ವೃಕ್ಷಮಣಿಧಾರಕ ವಂದಿಸಿದರು. ನಂತರ ವಿಶ್ವಶಾಂತಿ ದಿನಾಚರಣೆಯ ಅಂಗವಾಗಿ ಗ್ರಾಮದ ಪ್ರಮುಖ ಬೀದಿಗಳಲ್ಲಿ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳಿಂದ ಪಥಸಂಚಲನ (ಜಾಥಾ) ಹಮ್ಮಿಕೊಳ್ಳಲಾಗಿತ್ತು.

* ದಿನಾಂಕ 02-10-2016 ರಂದು ಗಾಂಧಿ ಜಯಂತಿ ಅಂಗವಾಗಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಕಾರವಾರ ಸಂಯುಕ್ತಾಶ್ರಯದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಸ್ವಚ್ಛತಾ ಅಭಿಯಾನ ಜಾಥಾವನ್ನು ಕಾರವಾರ ಬಾಲಮಂದಿರದಿಂದ ರವೀಂದ್ರನಾಥ ಠ್ಯಾಗೋರ ಕರಾವಳಿ ಕಡಲ ತೀರ ಸಭಾ ವೇದಿಕೆ ವರೆಗೆ ಆಯೋಜಿಸಲಾಗಿತ್ತು. ನಂತರ ಕಡಲ ತೀರದಲ್ಲಿರುವ ಸಾರ್ವಜನಿಕ ಉದ್ಯಾನವನದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಸ್ವಚ್ಛತಾ ಕಾರ್ಯವನ್ನು ಹಮ್ಮಿಕೊಳ್ಳಲಾಯಿತು.

ಶ್ರೀ ಸಂಜಯ ಸಾಳೋಂಕೆ, ನ್ಯಾಯವಾದಿಗಳು ಹಾಗೂ ಅಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ, ಕಾರವಾರ ಇವರು ಹಸಿರು ನಿಶಾನೆಯನ್ನು ತೋರಿಸಿ, ಜಾಥಾಕ್ಕೆ ಚಾಲನೆ ನೀಡಿದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಶ್ರೀ ಕಾಂತ ಹೆಗಡೆ, ಜಿಲ್ಲಾ ದೈಹಿಕ ಶಿಕ್ಷಣ ಸಂಘದ ಅಧೀಕ್ಷಕರಾದ ಶ್ರೀ ಆರ್.ಹೆಚ್. ನಾಯಸ್ಕ ಬಾಲಮಂದಿರದ ಪ್ರಾಚಾರ್ಯರಾದ ಶ್ರೀಮತಿ ಅಂಜಲಿ ಮಾನೆ, ಕಾರವಾರ ತಾಲೂಕಾ ದೈಹಿಕ ಶಿಕ್ಷಣ ಸಂಘದ ಅಧ್ಯಕ್ಷರಾದ ಶ್ರೀ ಮಹಾದೇವರಾಣೆ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳಾದ ಶ್ರೀ ಗಣೇಶ ಬಿಷ್ಟನ್ನನವರ್ ಸ್ಥಳೀಯ ಸಂಸ್ಥೆ ಖಜಾಂಚಿಗಳಾದ ಶ್ರೀ ಆರ್.ಕೆ. ದುರ್ಗೇಕರ್ ಎ.ಎಸ್.ಓ.ಸಿ. (ಸ್ಕೌಟ್) ಶ್ರೀ ನಾಗೇಶ ಆರ್. ಶಿವಪೂರ ಹಾಗೂ ಸ್ಕೌಟರ್-ಗೈಡರ್ಸ್ ಶಿಕ್ಷಕರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

## ಕೊಪ್ಪಳ

ದಿನಾಂಕ 14-10-2016 ರಿಂದ 18-10-2016ರ ವರೆಗೆ ಕೊಪ್ಪಳ ಜಿಲ್ಲಾ ಸಂಸ್ಥೆವತಿಯಿಂದ ಕರ್ನಾಟಕ ದರ್ಶನ ಪ್ರವಾಸವನ್ನು ಹಮ್ಮಿಕೊಳ್ಳಲಾಗಿತ್ತು. ಈ ಪ್ರವಾಸದಲ್ಲಿ ಜಿಲ್ಲೆಯ ಎಲ್ಲಾ ತಾಲೂಕಿನಿಂದ 24 ಗೈಡ್ಸ್, 72 ಸ್ಕೌಟ್ಸ್, 10 ಸ್ಕೌಟರ್ಸ್, ಗೈಡರ್ಸ್ ಹಾಗೂ ಡಿ. ಗ್ರೂಪ್ ಸಿಬ್ಬಂದಿ ಭಾಗವಹಿಸಿದದರು. 14-10-2016 ರಂದು ರಾತ್ರಿ 8.00 ಗಂಟೆಗೆ ಜಿಲ್ಲಾ ಕಾರ್ಯದರ್ಶಿ ಶ್ರೀ ಮಲ್ಲಿಕಾರ್ಜುನ ಚೌಕಿಮಠ್, ಜಿಲ್ಲಾ ಆಯುಕ್ತರಾದ ಶ್ರೀಮತಿ ಸಂಧ್ಯಾ ಮಾದಿನೂರು, ಜಿಲ್ಲಾ ಸ್ಥಾನಿಕ ಆಯುಕ್ತರುಗಳಾದ ಶ್ರೀ ಪ್ರಹ್ಲಾದ್ ಅಗಳಿ, ಶ್ರೀಮಹ್ಮದ್ ಅಲಿಮುದ್ದೀನ್ ಇವರು ಪ್ರವಾಸಕ್ಕೆ ಚಾಲನೆ ನೀಡಿ ಸ್ಕೌಟ್-ಗೈಡ್‌ಗಳಿಗೆ ಬ್ಯಾಗ್, ಟೀ ಶರ್ಟ್, ಕ್ಯಾಪ್ ಮುಂತಾದ ಸಾಮಾಗ್ರಿಗಳನ್ನು ವಿತರಿಸಿದರು.



ಈ ಪ್ರವಾಸದಲ್ಲಿ ಮೈಸೂರು, ಹಾಸನ, ಮಡಿಕೇರಿ, ಚಿಕ್ಕಮಗಳೂರು, ಬಳ್ಳಾರಿ ಜಿಲ್ಲೆ ಪ್ರೇಕ್ಷಣೀಯ ಸ್ಥಳಗಳನ್ನು ವೀಕ್ಷಿಸಲಾಯಿತು. ಈ ಸ್ಥಳಗಳ ಬಗ್ಗೆ ಪ್ರಬಂಧ ಮತ್ತು ಚಿತ್ರಕಲೆ ಸ್ಪರ್ಧೆ ನಡೆಸಿ ವಿಜೇತರಿಗೆ ಬಹುಮಾನ ವಿತರಿಸಲಾಯಿತು.

## ಮಧುಗಿರಿ

ದಿನಾಂಕ 02-10-2016 ರಂದು ಗಾಂಧೀಜಿ ಮತ್ತು ಲಾಲ್ ಬಹದ್ದೂರ್ ಶಾಸ್ತ್ರಿಯವರ ಜಯಂತಿ ಅಂಗವಾಗಿ ಮಧುಗಿರಿ ತಾಲ್ಲೂಕಿನ ಕೊಡಿಗೇನಹಳ್ಳಿ ಹೋಬಳಿಯ ಕಡಗತ್ತೂರು ಸರ್ಕಾರಿ ಪ್ರೌಢಶಾಲೆಯಲ್ಲಿ ಶಾಲಾ ಸ್ಕೌಟ್ಸ್-ಗೈಡ್ಸ್‌ಗಳು, ಸ್ಕೌಟ್ ಶಿಕ್ಷಕರಾದ ಶ್ರಿ ವೀರಕ್ಯಾತಪ್ಪನವರ ಮಾರ್ಗದರ್ಶನದಲ್ಲಿ ಸರ್ವಧರ್ಮ ಪ್ರಾರ್ಥನೆ ಮತ್ತು ಶ್ರಮದಾನ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ಶಿಕ್ಷಕ ಶ್ರೀ ರಾಮಾಂಜಿನಪ್ಪ ಸ್ವಾಗತಿಸಿದರು. ಸದರಿ ಶಾಲೆಯ ಮುಖ್ಯಶಿಕ್ಷಕರಾದ ಶ್ರೀ ರಾಮಕೃಷ್ಣಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಈ ಕಾರ್ಯಕ್ರಮವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಭಾಸ್ಕರ್ ರೆಡ್ಡಿ ಮತ್ತು ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ವಿನಯ ಕುಮಾರ್ ಟಿ.ಹೆಚ್. ರವರು ಉದ್ಘಾಟಿಸಿದರು. ಸಮಾರಂಭದಲ್ಲಿ ಗ್ರಾ.ಪಂ. ಅಧ್ಯಕ್ಷರಾದ ಶ್ರೀ ರಂಗಸ್ವಾಮಿ, ಮಾಜಿ ಅಧ್ಯಕ್ಷರಾದ ಶ್ರೀ ತಿಮ್ಮಾರೆಡ್ಡಿ ಎಸ್.ಡಿ.ಎಂ.ಸಿ. ಅಧ್ಯಕ್ಷರು ಹಾಗೂ ಸದಸ್ಯರು, ಗ್ರಾಮಸ್ಥರು ಉಪಸ್ಥಿತರಿದ್ದರು. ಶಿಕ್ಷಕ ಶ್ರೀ ಮಹೇಶ್ವರಯ್ಯ ವಂದಿಸಿದರು.

* ಮಧುಗಿರಿ ತಾಲ್ಲೂಕಿನ ಐ.ಡಿ.ಹಳ್ಳಿ ಹೋಬಳಿಯ ಐ.ಡಿಹಳ್ಳಿ ಸರ್ಕಾರಿ ಪದವಿ ಪೂರ್ವ ಕಾಲೇಜು ಪ್ರೌಢಶಾಲಾ ವಿಭಾಗದ ಉಪಪ್ರಾಂಶುಪಾಲರಾದ ಶ್ರೀ ಬಿ.ಎನ್. ನಾಗರಾಜುರವರ ಅಧ್ಯಕ್ಷತೆಯಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸದರಿ ಶಾಲೆಯ ಸ್ಕೌಟ್ಸ್ ಶಿಕ್ಷಕರಾದ ಶ್ರೀ ರಂಗನಾಥಪ್ಪರವರ ಮಾರ್ಗದರ್ಶನದಲ್ಲಿ ಐ.ಡಿ.ಹಳ್ಳಿ ನಾಡಭೇರಿ ಆವರಣದಲ್ಲಿ ಸ್ಕೌಟ್ಸ್‌ಗಳು ಸ್ವಚ್ಛಗೊಳಿಸಿದರು.

## ಮೈಸೂರು

* ದಿನಾಂಕ 11-10-2016 ರಂದು ದಸರಾ 2016ರ ಪಂಜಿನ ಕವಾಯಿತುನಲ್ಲಿ ಮೈಸೂರು ಜಿಲ್ಲೆಯ 31 ರೋವರ್ಸ್, ಸ್ಕೌಟ್ಸ್ ಮತ್ತು 31 ರೇಂಜರ್ಸ್, ಗೈಡ್ಸ್ ಭಾಗವಹಿಸಿದ್ದರು. ಡಾ. ಕೆ.ಬಿ. ಗುರುಮೂರ್ತಿರವರ ಮಾರ್ಗದಶನದಲ್ಲಿ ಮಕ್ಕಳಿಗೆ ಕವಾಯಿತಿನ ತರಬೇತಿಯನ್ನು ನೀಡಲಾಯಿತು.



* ದಿನಾಂಕ 18-10-2016 ರಂದು ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು ಇಲ್ಲಿ ಶ್ರೀ ರಂದೀಪ್, ಜಿಲ್ಲಾಧಿಕಾರಿಗಳು, ಮೈಸೂರು ರವರ ಅಧ್ಯಕ್ಷತೆಯಲ್ಲಿ 17ನೇ ರಾಷ್ಟ್ರೀಯ ಜಾಂಬೂರಿಯ ಪೂರ್ವಬಾವಿ ಸಭೆ ನಡೆಯಿತು. ಈ ಸಭೆಯಲ್ಲಿ ಶ್ರೀ ವೆಂಕಟೇಶ್, ಅಪರ ಜಿಲ್ಲಾಧಿಕಾರಿಗಳು, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಪ್ರಧಾನ ಆಯುಕ್ತರು, ಶ್ರೀ ಖಾಲಿದ್, ರಾಜ್ಯ ಆಯುಕ್ತರು (ಸ್ಕೌ), ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿಗಳು, ರಾಜ್ಯ ಸಂಸ್ಥೆ ಪದಾಧಿಕಾರಿಗಳು, ಶ್ರೀ ಪಿ. ವಿಶ್ವನಾಥ್, ಜಾಂಬೂರಿ ಕಾರ್ಯದರ್ಶಿಗಳು, ಮೈಸೂರು ಮತ್ತು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಮತ್ತು ಜಿಲ್ಲೆಯ ವಿವಿಧ ಇಲಾಖೆಗಳ ಅಧಿಕಾರಿಗಳು ಭಾಗವಹಿಸಿದ್ದರು.

* ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಿದ್ದಾರ್ಥ ನಗರ, ಮೈಸೂರಿನ ರೋವರ್ಸ್ ಮತ್ತು ರೇಂಜರ್ಸ್ ಘಟಕದ ವತಿಯಿಂದ ಮೈಸೂರಿನ ಜ್ಯೋತಿನಗರದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ ನೋಟ್ ಪುಸ್ತಕವನ್ನು ಉಚಿತವಾಗಿ ನೀಡಲಾಯಿತು ಮತ್ತು ಸ್ವಚ್ಛತೆಯ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮ ನೆರವೇರಿತು. ಡಾ. ಕೆ.ಬಿ. ಗುರುಮೂರ್ತಿ, ಜಿಲ್ಲಾ ಖಜಾಂಚಿಗಳು, ಶ್ರೀ ಸಂದೇಶ್ ಸ್ವಾಮಿ ಮಾಜಿ ಮಹಾಪೌರರು, ಮೈಸೂರು ರವರು ಸಮಾರಂಭದ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಡಾ. ಚೆನ್ನಬಸವೇಗೌಡರವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಜಿಲ್ಲಾ ಸಂಘಟಕರಾದ ಶ್ರೀ ರಾಮಪ್ರಸಾದ್ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.



## ರಾಯಚೂರು

ದಿನಾಂಕ 18-10-2016 ರಿಂದ 22-10-2016 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಹಾಗೂ ರಾಜ್ಯ ಪ್ರವಾಸೋದ್ಯಮ ಇಲಾಖೆ, ರಾಜ್ಯ ಸಂಸ್ಥೆ ಇವರುಗಳ ಸಹಯೋಗದಲ್ಲಿ ಕರ್ನಾಟಕದ 5000 ಸ್ಕೌಟ್ಸ್-ಗೈಡ್ಸ್‌ಗಳಿಗೆ ಎರಡನೆಯ ಬಾರಿಗೆ ಕರ್ನಾಟಕ ದರ್ಶನ ಕಾರ್ಯಕ್ರಮಕ್ಕೆ ಉಚಿತವಾಗಿ 4 ದಿನಗಳ ಪ್ರವಾಸ ಭಾಗ್ಯವನ್ನು ನೀಡಲಾಗಿದ್ದು 2016-17ನೇ ಸಾಲಿಗೆ ರಾಯಚೂರು ಜಿಲ್ಲೆಯ 224 ಸ್ಕೌಟ್ಸ್-ಗೈಡ್ಸ್‌ಗಳಿಗೆ "ಕರ್ನಾಟಕ ದರ್ಶನ" ಭಾಗ್ಯ ಕರ್ನಾಟಕ ಸರ್ಕಾರ ಕಲ್ಪಿಸಿ ಕೊಟ್ಟಿತು. 4 ಬಸ್‌ಗಳ ಮೂಲಕ ದಕ್ಷಿಣ ಕರ್ನಾಟಕದ ಆಧ್ಯತೆಯ ಪ್ರೇಕ್ಷಣೀಯ ಜಿಲ್ಲೆಗಳಾದ, ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ, ಮೈಸೂರು ಜಿಲ್ಲೆಯ ಮೈಸೂರು ಅರಮನೆ, ಮೃಗಾಲಯ, ಸಂತ್ ಫೀಲೋಮಿನಾರ್ ಚರ್ಚ್, ಬೃಂದಾವನ, ಮಡಕೆರಿ ಜಿಲ್ಲೆಯ ಗೋಲ್ಡನ್ ಟೆಂಪಲ್, ರಾಜಾಸೀಟ್, ಓಂಕಾರೇಶ್ವರ ದೇವಸ್ಥಾನ, ಅಬ್ಬೆಫಾಲ್ಸ್ ಹಾಸನ ಜಿಲ್ಲೆಯ- ಶ್ರವಣಬೆಳಗೊಳ, ಬೇಲೂರು-ಹಳೇಬೀಡು, ಚಿಕ್ಕಮಂಗಳೂರು ಜಿಲ್ಲೆಯ ಹೊರನಾಡು, ಶೃಂಗೇರಿ ಶಾರದಾಂಬೆ ದೇವಸ್ಥಾನ, ತೂಗುಸೇತುವೆ, ಇತ್ಯಾದಿ ಸ್ಥಳಗಳನ್ನು ವೀಕ್ಷಿಸಲಾಯಿತು.

ದಿನಾಂಕ 18-10-2016 ರಂದು ಕರ್ನಾಟಕ ದರ್ಶನಕ್ಕೆ ಶ್ರೀ ಪಿ.ಜಿ.ಎಂ. ಪಾಟೀಲ್ ಜಿಲ್ಲಾ ಸತ್ರ ನ್ಯಾಯಾಧೀಶರು ರಾಯಚೂರು ಇವರು ಹಸಿರು ನಿಶಾನೆ ತೋರಿಸಿ ಶುಭ ಕೋರಿದ್ದರು. ಈ ಸಂದರ್ಭದಲ್ಲಿ ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಹೆಚ್. ಹನುಮಂತಪ್ಪ ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಕೆ. ಆಲಿಯಾ ಖಾನಂ ಜಿಲ್ಲಾ ಖಜಾಂಚಿಗಳು, ಹಾಗೂ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ನಂತರ ಅವರು ಸ್ಕೌಟ್-ಗೈಡ್‌ಗಳಿಗೆ ಕರ್ನಾಟಕ ದರ್ಶನ ಸುಖಕರವಾಗಲೆಂದು ಶುಭ ಹಾರೈಸಿದರು.

* ದಿನಾಂಕ 01-11-2016 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ 61ನೇ ಕನ್ನಡ ರಾಜ್ಯೋತ್ಸವವನ್ನು ಕನ್ನಡಾಂಬೆಯ ಭಾವಚಿತ್ರಕ್ಕೆ ಪೂಜೆ ಸಲ್ಲಿಸುವುದರ ಮೂಲಕ ಆಚರಿಸಲಾಯಿತು. ನಂತರ ಜಿಲ್ಲಾ ಪೊಲೀಸ್ ಪರೇಡ್ ಮೈದಾನದಲ್ಲಿ "ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರಾದ ಶ್ರೀಮತಿ ಉಮಾಶ್ರೀಯವರು ರಾಷ್ಟ್ರಧ್ವಜವನ್ನು ಅರಳಿಸಿದರು. ಗೈಡ್ಸ್‌ಗಳು ಪಥಸಂಚಲನ ಮಾಡುವ ಮೂಲಕ ಸಚಿವರಿಗೆ ಗೌರವವನ್ನು ಸಲ್ಲಿಸಿದರು. ನಂತರ ಪಥಸಂಚಲನದಲ್ಲಿ ಭಾಗವಹಿಸಿದ ಎಲ್ಲಾ ಗೈಡ್ಸ್‌ಗಳಿಗೆ ಪ್ರಶಸ್ತಿ ನೀಡಲಾಯಿತು.

* ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಶಿಸ್ತು, ಸೇವಾ ಮನೋಭಾವ ಮತ್ತು ಸ್ವಯಂ ಮೌಲ್ಯಮಾಪನ ಮಾಡಿಕೊಳ್ಳುವಲ್ಲಿ ಸ್ಕೌಟಿಂಗ್-ಗೈಡಿಂಗ್ ಸಹಕಾರಿಯಾಗಿದೆ ಎಂದು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ ಶ್ರೀ ಕೂರ್ಮಾರಾವ್ ಹೇಳಿದರು. ನಗರದ ಜಿಲ್ಲಾ ಪಂಚಾಯತ್ ಜಲನಿರ್ಮಲ ಸಭಾಂಗಣದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯಿಂದ ಸಂಸ್ಥಾಪನಾ ದಿನಾಚರಣೆ ಮತ್ತು ಧ್ವಜ ಚೀಟಿ ಬಿಡುಗಡೆ ಸಮಾರಂಭದಲ್ಲಿ ಮಾತನಾಡಿದರು. ಮತ್ತೊಮ್ಮೆ ನನ್ನ ಮಾತೃ ಕುಟುಂಬದಲ್ಲಿ ಪಾಲ್ಗೊಳ್ಳಲು ಅವಕಾಶ ದೊರಕಿದ್ದು ತುಂಬಾ ಸಂತಸವನ್ನು ತಂದಿದೆ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಯುವಜನತೆಯ ಅಭಿವೃದ್ಧಿಗೆ ಈ ಚಳುವಳಿ ಸಹಕಾರಿಯಾಗಿದೆ ಎಂದು ಅಭಿಪ್ರಾಯ ಪಟ್ಟರು. ಜಿಲ್ಲಾಡಳಿತ ಜಿಲ್ಲಾ ಪಂಚಾಯತ್ ಸಹಕಾರದೊಂದಿಗೆ ಗ್ರಾಮೀಣ ಹಾಗೂ ಸ್ವಚ್ಛತೆ ಮತ್ತು ಆರೋಗ್ಯದ ಕುರಿತು ಜನ ಜಾಗೃತಿ ಮೂಡಿಸಿ ಪ್ರತಿಯೊಂದು ಮನೆಯಲ್ಲಿ ಶೌಚಾಲಯಗಳ ನಿರ್ಮಾಣ ಹಾಗೂ ಸ್ವಚ್ಛತೆಯ ಕುರಿತು ಶಿಬಿರವನ್ನು ಏರ್ಪಡಿಸಲು ಸಮ್ಮತಿಸಿದರು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಶಿಕ್ಷಣಾಧಿಕಾರಿ ಶ್ರೀಮತಿ ಆರ್. ಇಂದಿರಾ, ಗೈಡ್ಸ್‌ನ ಜಿಲ್ಲಾ ಆಯುಕ್ತರಾದ ಶ್ರೀಮತಿ ಅಜೀಜಾ ಸುಲ್ತಾನ್, ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಹೆಚ್. ಹನುಮಂತಪ್ಪ ಉಪಸ್ಥಿತರಿದ್ದರು. ಈ ಸಂದರ್ಭದಲ್ಲಿ ಹಮ್ಮಿಕೊಂಡಿದ್ದ ಸೈಕಲ್ ಜಾಥಾಕ್ಕೆ ಜಿಲ್ಲಾ ಶಿಕ್ಷಣಾಧಿಕಾರಿಗಳು ಹಸಿರು ನಿಶಾನೆ ತೋರಿಸುವ ಮೂಲಕ ಚಾಲನೆ ನೀಡಿದರು..

## ಶಿವಮೊಗ್ಗ

ದಿನಾಂಕ 09-11-2016 ರಂದು ಭದ್ರಾವತಿ ತಾಲ್ಲೂಕು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ವತಿಯಿಂದ ಸಂಸ್ಥಾಪನಾ ದಿನಾಚರಣೆಯನ್ನು ಆಚರಿಸಲಾಯಿತು. ತಾಲ್ಲೂಕು ಕಛೇರಿಯಲ್ಲಿ ಮಾನ್ಯ ತಹಶಿಲ್ದಾರರಾದ ಶ್ರೀ ಎಂ.ಆರ್. ನಾಗರಾಜ್, ಅಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಭದ್ರಾವತಿ ಇವರು ಸ್ಟಾಂಪ್‌ಗಳನ್ನು ಬಿಡುಗಡೆಗೊಳಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಬಿ.ಇ.ಓ. ರವರಾದ ಶ್ರೀಯುತ ಟಿ. ಶಂಕರಪ್ಪ ಉಪಾಧ್ಯಕ್ಷರು ಭಾ.ಸ್ಕೌ-ಗೈ ಸ್ಥಳೀಯ ಸಂಸ್ಥೆ ಭದ್ರಾವತಿ ಇವರು ಸ್ಟಾಂಪ್‌ಗಳನ್ನು ಬಿಡುಗಡೆಗೊಳಿಸಿದರು. ನಗರ ಸಭೆಯಲ್ಲಿ ಆಯುಕ್ತರಾದ ಶ್ರೀ ಮನೋಹರ್ ಉಪಾಧ್ಯಕ್ಷರು ಭಾ.ಸ್ಕೌ.ಗೈ. ಸ್ಥಳೀಯ ಸಂಸ್ಥೆ ಭದ್ರಾವತಿ ಇವರು ಸ್ಟಾಂಪಗಳನ್ನು ಬಿಡುಗಡೆಗೊಳಿಸಿದರು. ಶ್ರೀ ಹೆಚ್. ಶಿವಶಂಕರ್ ಜಿಲ್ಲಾ ಸಂಘಟನಾ ಆಯುಕ್ತರು, ಶಿವಮೊಗ್ಗ, ಶ್ರೀ ಜಿ.ಟಿ. ಗುರುಲಿಂಗಪ್ಪ ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ಭದ್ರಾವತಿ, ಶ್ರೀಮತಿ ಫಾತಿಮಾ ಗೈಡ್ ಶಿಕ್ಷಕಿ ಹಾಗೂ ಹಲವು ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## ತುಮಕೂರು



ದಿನಾಂಕ 02-10-2016 ರಂದು ಶ್ರೀ ಸಿದ್ಧಗಂಗಾ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ತುಮಕೂರು ಜಿಲ್ಲಾ ಸಂಸ್ಥೆಯ ವತಿಯಿಂದ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಜಿಲ್ಲಾ ಪದಾಧಿಕಾರಿಗಳು, ಶಿಕ್ಷಕರು, ಹಾಗೂ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಪರಮ ಪೂಜ್ಯರು ಸರ್ವಧರ್ಮ ಪ್ರಾರ್ಥನೆ ಮಾಡಿದ ಶಿಕ್ಷಕರು ಹಾಗೂ ವಿದ್ಯಾರ್ಥಿಗಳನ್ನು ಕುರಿತು ಮೆಚ್ಚುಗೆ ವ್ಯಕ್ತಪಡಿಸಿದರು.



* ದೇಶದ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಉತ್ತಮ ಪ್ರಜೆಗಳನ್ನು ತರಬೇತುಗೊಳಿಸುವ ಮುಖ್ಯ ಸಂಸ್ಥೆಯಾಗಿದೆ ಎಂದು ಮೇಯರ್ ಶ್ರೀಮತಿ ಯಶೋದಮ್ಮ ಶ್ರೀನಿವಾಸ್ ಅಭಿಪ್ರಾಯಪಟ್ಟರು. ನಗರದ ಸರ್ಕಾರಿ ಜೂನಿಯರ್ ಕಾಲೇಜು ಆವರಣದಲ್ಲಿ ಹಮ್ಮಿಕೊಳ್ಳಲಾಗಿದ್ದ ಭಾರತ್ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್ಸ್, ಸ್ಕೌಟರ್ಸ್-ಗೈಡರ್ಸ್, ರೋವರ್ಸ್-ರೇಂಜರ್ಸ್ ಜಿಲ್ಲಾ ರ್‍ಯಾಲಿಯನ್ನು ಉದ್ದೇಶಿಸಿ ಅವರು ಮಾತನಾಡಿದರು. ಮುಂದಿನ ದಿನಗಳಲ್ಲಿ ಎಲ್ಲಾ ಸ್ಕೌಟ್ಸ್-ಗೈಡ್ಸ್‌ಗಳು ಇದರ ಧ್ಯೇಯ ಉದ್ದೇಶಗಳನ್ನು ಸರಿಯಾಗಿ ಅರ್ಥೈಸಿಕೊಂಡು ರಾಜ್ಯ, ರಾಷ್ಟ್ರ ಮತ್ತು ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ಭಾಗವಹಿಸುವಂತೆ ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಮುಖ್ಯ ಆಯುಕ್ತೆ ಶ್ರೀಮತಿ ಆಶಾ ಪ್ರಸನ್ನಕುಮಾರ್ ಮಾತನಾಡಿ, ರಾಷ್ಟ್ರೀಯ ಮಟ್ಟದ ಜಾಂಬೂರಿಯಲ್ಲಿ ಎಲ್ಲಾ ಸ್ಕೌಟ್-ಗೈಡ್‌ಗಳು ಪಾಲ್ಗೊಳ್ಳುವಂತೆ ತಿಳಿಸಿದರು. ಕಾರ್ಯಕ್ರಮದಲ್ಲಿ ಸಾಂಸ್ಕೃತಿಕ ಚಟುವಟಿಕೆ, ಚಿತ್ರಕಲೆ, ರಂಗೋಲಿ, ತರಕಾರಿ ಮೇಳ, ವಿವಿಧ ವೇಷ ಭೂಷಣ ಸ್ಪರ್ಧೆ, ಸಾಹಸಮಯ ಕ್ರೀಡೆಗಳಾದ ಮಂಕಿಬ್ರಿಜ್, ಟೈರ್‌ವಾ ಮತ್ತಿತರ ಪ್ರದರ್ಶನಗಳು ನಡೆದವು.

## ಉಡುಪಿ

ದಿನಾಂಕ 08-11-2016 ಮತ್ತು 09-11-2016 ರಂದು ಟ್ರಿನಿಟಿ ಸೆಂಟ್ರಲ್ ಸ್ಕೂಲ್ ಪೆರಂಪಳ್ಳಿ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಉಡುಪಿ ಹಾಗೂ ಸ್ಥಳೀಯ ಸಂಸ್ಥೆ ಕಲ್ಯಾಣ್‌ಪುರ ಇವರ ಜಂಟಿ ಆಶ್ರಯದಲ್ಲಿ ಉಡುಪಿ ಜಿಲ್ಲಾ ಮಟ್ಟದ ಕಬ್ ಬುಲ್ ಬುಲ್ ಉತ್ಸವ ಕಾರ್ಯಕ್ರಮವು ಟ್ರಿನಿಟಿ ಸೆಂಟ್ರಲ್ ಸ್ಕೂಲ್ ಪೆರಂಪಳ್ಳಿ ಇಲ್ಲಿ ನಡೆಯಿತು.



ಕಾರ್ಯಕ್ರಮದ ಉದ್ಘಾಟನೆಯನ್ನು ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಡ್ವಿನ್ ಆಳ್ವ ಇವರು ನೆರವೇರಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಟ್ರಿನಿಟಿ ಸೆಂಟ್ರಲ್ ಸ್ಕೂಲ್ ಪೆರಂಪಳ್ಳಿ ಇದರ ಪ್ರಾಂಶುಪಾಲರಾದ ರೆ। ಫಾ। ಅನಿಲ್ ಡಿ ಕೋಸ್ಟ ಇವರು ವಹಿಸಿದ್ದರು. ಜಿಲ್ಲಾ ಆಯುಕ್ತೆ (ಗೈಡ್) ಶ್ರೀಮತಿ ರಾಜಲಕ್ಷ್ಮೀ ಡಿ ಶೆಟ್ಟಿ ಹಾಗೂ ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖರ್ ಪೂಜಾರಿ, ಪ್ರೊ. ದಯಾನಂದ ಶೆಟ್ಟಿ ಇವರು ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು.

ಶಿಬಿರದಲ್ಲಿ, ನಗರ ಮೆರವಣಿಗೆ, ಕರಕುಶಲ ತಯಾರಿ, ಗುಂಪು ರಚನೆ, ಕಲರವ. ಬಿ.ಪಿ. ವ್ಯಾಯಾಮ, ಸರ್ವಧರ್ಮ ಪ್ರಾರ್ಥನೆ, ಜನಪದ ನೃತ್ಯ, ಅಭಿನಯ ಗೀತೆ. ಸಾಹಸಮಯ ಆಟಗಳು, ತೆಂಗಿನ ಗರಿಯಿಂದ ವಿವಿಧ ಆಟಿಕೆ ರಚನೆ ಇತ್ಯಾದಿ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಬ್ರಹ್ಮಾವರ ಶಿಕ್ಷಣಾಧಿಕಾರಿಗಳಾದ ಶ್ರೀ ನಾಗೇಶ್ ಶಾನ್‌ಬಾಗ್, ಜಿಲ್ಲಾ ಪದಾಧಿಕಾರಿಯಾದ ಡಾ। ಜಯರಾಮ್ ಶೆಟ್ಟಿಗಾರ್ ಭಾಗವಹಿಸಿದದರು. ಕು। ಲವೀನ ಕಬ್ ವಿಭಾಗಕ್ಕೆ ಹಾಗೂ ಕು। ಸುಷ್ಮ ಸುವರ್ಣ ಬುಲ್ ಬುಲ್ ವಿಭಾಗಕ್ಕೆ ಶಿಬಿರದ ನಾಯಕರಾಗಿ ಸಹಕರಿಸಿದರು. ದೀಪ್ತಿ ಸ್ವಾಗತಿಸಿದರು. ಶ್ರೀಮತಿ ಜನೆಟ್ ಎಲ್ಲರಿಗೂ ಧನ್ಯವಾದ ನೀಡಿದರು. ಶ್ರೀಮತಿ ನೇತ್ರಾವತಿ ಕಾರ್ಯಕ್ರಮ ನಿರೂಪಿಸಿದರು.



262 ಮಕ್ಕಳು ಜಿಲ್ಲಾ ಮಟ್ಟದ ಕಬ್, ಬುಲ್‌ಬುಲ್ ಉತ್ಸವದಲ್ಲಿ ಕಬ್ ಮತ್ತು ಬುಲ್‌ಬುಲ್ ಶಿಕ್ಷಕ-ಶಿಕ್ಷಕಿಯರೊಂದಿಗೆ ಭಾಗವಹಿಸಿದ್ದರು. ಕಾರ್ಯಕ್ರಮವನ್ನು ಜಿಲ್ಲಾ ಸಂಘಟಕರಾದ ನಿತಿನ್ ಅಮಿನ್ ಹಾಗೂ ಶ್ರೀಮತಿ ಸುಮನ್ ಶೇಖರ್ ಎಲ್ಲರ ಸಹಕಾರದಿಂದ ಸಂಘಟಿಸಿದರು.

## ವಿಜಯಪುರ

ದಿನಾಂಕ 8-11-2016 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವಿಜಯಪುರ ಇವರು ಹಮ್ಮಿಕೊಂಡಿದ್ದ ಜಿಲ್ಲಾ ಮಟ್ಟದ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್ ಮೂಲ ತರಬೇತಿಯನ್ನು ಶ್ರೀ ಅಮೋಘಸಿದ್ದೇಶ್ವರ ದೇವಸ್ಥಾನ ಅರಕೇರಿ ಗುಡ್ಡದಲ್ಲಿ ಉದ್ಘಾಟಿಸಲಾಯಿತು.



ಜಿಲ್ಲಾ ಸಂಸ್ಥೆಯ ಸ್ಥಾನಿಕ ಆಯುಕ್ತರಾದ ಶ್ರೀ ಎಸ್.ಎಲ್. ಇಂಗಳೇಶ್ವರ ಅವರು ಶಿಬಿರವನ್ನು ಉದ್ಘಾಟಿಸಿ ಮಾತನಾಡುತ್ತಾ ತರಬೇತಿಯಲ್ಲಿ ಪಡೆದ ಸಂಪನ್ಮೂಲವನ್ನು ವರ್ಗ ಕೋಣೆಗೆ ವರ್ಗಾಯಿಸಿದಾಗ ತರಬೇತಿಗಳು ಸಾರ್ಥಕತೆ ಕಾಣುತ್ತದೆ. ಆದ್ದರಿಂದ ಇಲ್ಲಿ ಪಡೆದ ತರಬೇತಿಯನ್ನು ಶಿಬಿರಾರ್ಥಿಗಳು ತಮ್ಮ ತಮ್ಮ ಶಾಲಾ ಮಕ್ಕಳಿಗೆ ಧಾರೆ ಎರೆಯಬೇಕು ಎಂದು ಕರೆ ನೀಡಿದರು.

ಮುಖ್ಯ ಅತಿಥಿಯಾಗಿದ್ದ ಸಂಸ್ಥೆಯ ಉಪಾಧ್ಯಕ್ಷ ಶ್ರೀ ವಾಸುದೇವ ಹೆರಕಲ್ ಮಾತನಾಡಿ. ಈ ಸ್ಕೌಟ್-ಗೈಡ್ ತರಬೇತಿಯಲ್ಲಿ ಸಂಪನ್ಮೂಲ ವ್ಯಕ್ತಿಗಳು ಜ್ಞಾನದ ಗಂಟು ಹೊತ್ತು ಬಂದಿದ್ದು ಶಿಬಿರಾರ್ಥಿಗಳು ಅದನ್ನು ಆಸ್ವಾದಿಸಬೇಕೆ ಹೊರತು ನೋಡಿ ಹೋಗುವ ಜನ ಆಗಬಾರದು ಎಂದು ಕಿವಿ ಮಾತು ಹೇಳಿದರು.

ಅತಿಥಿಗಳಾಗಿದ್ದ ಗ್ರಾಮೀಣ ವಲಯದ ದೈಹಿಕ ಶಿಕ್ಷಣಾಧಿಕಾರಿ ಶ್ರೀ ಪಾಟೀಲ ಮಾತನಾಡಿ ತರಬೇತಿ ಪಡೆದವರು ಕಡ್ಡಾಯವಾಗಿ ಶಾಲೆಯಲ್ಲಿ ದಳ ಆರಂಭಿಸಿ ಯಶಸ್ವಿಯಾಗಿ ನಡೆಸಿಕೊಂಡು ಹೋಗಬೇಕೆಂದು ಸಲಹೆ ಮಾಡಿದರು. ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಕೋಶಾಧ್ಯಕ್ಷ ಶ್ರೀ ಸಹಜಾನಂದ ದಂಧರಗಿ ಮಾತನಾಡಿ ಸ್ಕೌಟ್-ಗೈಡ್‌ಗಳಿಗೆ ಇರುವ ಪ್ರಯೋಜನೆಗಳನ್ನು ವಿವರಿಸಿ ಅದರ ಲಾಭ ಪಡೆಯುವಂತೆ ಕರೆ ನೀಡಿದರು.

ಜಿಲ್ಲಾ ಕಾರ್ಯದರ್ಶಿ ಶ್ರೀ ಪಿ.ಎಸ್. ಕುಂಬಾರ ಪ್ರಾಸ್ತಾವಿಕವಾಗಿ ಮಾತನಾಡಿ ತರಬೇತಿಯ ವಿವರ ಮತ್ತು ಅಗತ್ಯದ ಕುರಿತು ವಿವರಿಸಿದರು.

ಕಾರ್ಯಕ್ರಮದಲ್ಲಿ ಉದ್ಯಮಿ ಶ್ರೀ ವಿಕ್ರಮ, ಶಿಬಿರದ ನಾಯಕರಾದ ಶ್ರೀ ಪಿ. ಮಂಜುನಾಥ, ಉಪಸ್ಥಿತರಿದ್ದರು ಶ್ರೀ ಎಸ್.ಎಸ್. ಹುಬ್ಬಳ್ಳಿ ಕಾರ್ಯಕ್ರಮ ನಿರೂಪಿಸದರೆ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಸ್ವಾಗತಿಸಿದರು. ಶ್ರೀ ಡಿ.ಎಲ್. ಪಿಂಜಾರ ವಂದಿಸಿದರು.

# Congratulations



**SRI V. A. SATAPUTE, Rover Scout Leader, Govt. P.U. College, Gokak Receiving Prize & Certificate from Mr. Richard Brooks Co-Foundar, FD Solutions, London (U.K)**

**(Sri B.I. Nagarale, Chief National Commissioner & Sri P.G.R. Sindhia, State Chief Commissioner have congratulated him for the award received)**

# 17ನೇ ಜಾಂಬೂರಿಯ ಸಂದೇಶ ವಾಕ್ಯ

17ನೇ ರಾಷ್ಟ್ರೀಯ ಸ್ಕೌಟ್–ಗೈಡ್ಸ್ ಜಾಂಬೂರಿಯನ್ನು (ಮಹಾಸಮಾವೇಶ) ಆಯೋಜಿಸುವ ಸುಯೋಗ, ಮೂರನೇ ಬಾರಿ ಕರ್ನಾಟಕ ರಾಜ್ಯದ ಸ್ಕೌಟ್–ಗೈಡ್ ಸಂಸ್ಥೆಗೆ ದೊರೆತಿದೆ. 1960 ಮತ್ತು 1986 ರಲ್ಲಿ ಇಂತಹ ಅವಕಾಶ ನಮ್ಮದಾಗಿತ್ತು. ಪ್ರತಿ ಮಹಾಸಮಾವೇಶದಲ್ಲೂ ಒಂದು ಸಂದೇಶ ವಾಕ್ಯ (Theme) ರಚಿಸುವುದು ಸಂಪ್ರದಾಯ. ಈ ಬಾರಿಯ ಸಂದೇಶ ವಾಕ್ಯ "Together for better tomorrow" "ಉತ್ತಮ ನಾಳೆಗಾಗಿ ಜೊತೆಗೂಡೋಣ". ಈ ವಾಕ್ಯ ನಮ್ಮ ಚಳವಳಿಯ ತಿರುಳು.

ಈ ಚಳವಳಿಯ ವಿನೂತನ ತರಬೇತಿ ವಿಧಾನವೇ "Working to gether in a Small group" "ಚಿಕ್ಕ ಗುಂಪಿನಲ್ಲಿ ಒಟ್ಟಾಗಿ ಕೆಲಸ ಮಾಡುವುದು" ಈ ಪದ್ಧತಿಯನ್ನು ಪಟಾಲಂ ಪದ್ಧತಿ ಎಂದು ಕರೆಯಲಾಗಿದೆ. ಚಳವಳಿಯ ಸಂಸ್ಥಾಪಕರು ಹಾಗು ಬ್ರಿಟಿಷ್ ಸೈನ್ಯಾಧಿಕಾರಿ ಆದ ಲಾರ್ಡ್ ಬೇಡನ್ ಪಾವೆಲ್ಲರು ಈ ಪದ್ಧತಿಯನ್ನು ಸಂಶೋಧಿಸಿ ಪ್ರಯೋಗಿಸಿ ಬಾಯ್ಸ್ ಸ್ಕೌಟ್ ಸೈನ್ಯದಲ್ಲಿ ಮತ್ತು ಗರ್ಲ್ ಗೈಡ್ ಚಳವಳಿಯಲ್ಲಿ ಅಳವಡಿಸಿದರು. ಈ ಪದ್ಧತಿಯಲ್ಲಿ ಸ್ನೇಹ, ಪ್ರೀತಿ, ಹೊಂದಾಣಿಕೆ, ವಿಷಯ, ವಸ್ತು ವಿಚಾರಗಳ ಪರಸ್ಪರ ವಿನಿಮಯ, ಶಿಸ್ತು, ನಾಯಕತ್ವ ಮುಂತಾದ ಜೀವನ ಮೌಲ್ಯಗಳು ಗುಂಪಿನಲ್ಲಿ ಒಟ್ಟಾಗಿ ಕೆಲಸ ಮಾಡುವಾಗ, ವಾಸ ಮಾಡುವಾಗ ತಂತಾನೆ ಅಭಿವೃದ್ಧಿಗೊಳ್ಳುತ್ತದೆ. ಇವೆಲ್ಲದರ ಜೊತೆಗೆ ಒಟ್ಟಾಗಿ ಸಮಸ್ಯೆ ಪರಿಹರಿಸುವ, ಸವಾಲೆದುರಿಸುವ ಜೀವನ ಕೌಶಲ ಬೆಳೆಸುತ್ತದೆ. ಈ ಬಾರಿಯ ಸಂದೇಶ ವಾಕ್ಯ ಚಳವಳಿಯ ವಿಸ್ತೃತ ತಿರುಳಾಗಿದೆ. ಈ ವಾಕ್ಯವು ಚಳವಳಿಯ ಸಿದ್ಧಾಂತದ ಅನ್ವಯವಾಗಿದ್ದು ಹಾಗೂ ಉದ್ದೇಶವಾಗಿದ್ದು ಸುಂದರ, ಸರಳ ಹಾಗೂ ಅರ್ಥಪೂರ್ಣವಾಗಿ ಮೂಡಿ ಬಂದಿದೆ.

ಬೇಡನ್ ಪಾವೆಲ್ಲರು "ನಾವು ಬಂದದಿನಕ್ಕಿಂತಲೂ ಬಿಟ್ಟುಹೋಗುವಾಗ ಈ ಪ್ರಪಂಚವನ್ನು ಉತ್ತಮಗೊಳಿಸಿ ಹೋಗಬೇಕು" ಎಂದಿದ್ದಾರೆ. ಮಹಾಸಮಾವೇಶದಲ್ಲಿ ಭಾಗವಹಿಸುವ ಮಕ್ಕಳು, ಬಂದ ದಿನಕ್ಕಿಂತಲೂ ಸ್ಥಳವನ್ನು ಉತ್ತಮವಾಗಿ ಬಿಟ್ಟು ಹೋಗುವುದೇ ಅಲ್ಲದೆ ಅವರೂ ಕೂಡ ಉತ್ತಮ ಪ್ರಜೆಗಳಾಗಿ ಉತ್ತಮ ನಾಳೆಯ ಕನಸನ್ನು ನನಸು ಮಾಡುವತ್ತ ಸಾಗುತ್ತಾರೆ ಎಂಬುದು ಚಳವಳಿಯ ಹಿರಿಯರ ಆಶಯವಾಗಿದೆ.

ಚಳವಳಿಯ ಎಲ್ಲಾ ಕಾರ್ಯಕ್ರಮಗಳಲ್ಲೂ ಈ ವಾಕ್ಯ ಪ್ರತಿಬಿಂಬಿಸುತ್ತದೆ. ಪ್ರಾರ್ಥನಾ ಗೀತೆಯಲ್ಲಿ "ಹಮೆ ಆಪಸ್ ಮೆ ಮಿಲ್‌ಝುಲ್ ಕರ್ ಪ್ರಭುರೆಹನಾ ಸಿಖಾದೇನಾ" ಎಂದು ಭಗವಂತನಲ್ಲಿ ಕೇಳಿಕೊಳ್ಳುತ್ತೇವೆ. ಸರ್ವಧರ್ಮ ಪ್ರಾರ್ಥನೆಯಲ್ಲಿ, "ಹಮ್ ಸಬ್ ಕಷ್ಟ ಉಠಾಂಯೇಂಗೆ; ಸಬ ಮಿಲಕರ್ ಸುಖ ಪಾಯೇಂಗೆ", "we shall over come", "ಸಬಕೋ ಸನ್ಮತಿ ದೇ ಭಗವಾನ್" ಎಂದು ಹಾಡುತ್ತೇವೆ. ಇವೆಲ್ಲವೂ ಎಲ್ಲರಿಗಾಗಿ ಮಾಡುವ ಪ್ರಾರ್ಥನೆ. ಭೋಜನಕ್ಕೆ ಮುನ್ನ ಭೋಜನ ಸ್ತೋತ್ರ ಹೇಳುತ್ತೇವೆ. " ಓಂ ಸಹನಾ ವವತು ಸಹನಾ ಭುನಕ್ತು ಸಹ ವಿರ್ಯಂ ಕರವಾವಹೈ, ತೇಜಸ್ವಿನಾ ವಧೀತ ಮಸ್ತು, ಮಾವಿದ್ವಿವಿಶಾವಹೈ ಓಂ ಶಾಂತಿಃ ಶಾಂತಿ:, ಶಾಂತಿಃ" ಇವೆಲ್ಲವೂ ಎಲ್ಲರಿಗಾಗಿ ಮಾಡುವ ಪ್ರಾರ್ಥನೆಯಾಗಿದೆ. ನಾವೆಲ್ಲರೂ ಜೊತೆ ಜೊತೆಯಾಗಿ ಮಾಡೋಣ, ಒಟ್ಟುಗೂಡಿ ಕೆಲಸ ಭೋಜನ ಮಾಡೋಣ, ಒಟ್ಟಾಗಿ ತೇಜಸ್ವಿಗಳಾಗಿ ಬೆಳೆಯೋಣ. ಹೀಗೆ ನಾವು ಬದುಕಿದರೆ ನಮ್ಮ ನಾಳೆಯು ಉತ್ತಮವಾಗಿರುವುದರಲ್ಲಿ ಸಂಶಯವಿಲ್ಲ.

ಮಹಾಸಮಾವೇಶವು ಸಂದೇಶ ವಾಕ್ಯದ ಪ್ರತ್ಯಕ್ಷ ಅನುಭವವಾಗಿರುತ್ತದೆ. ಮಕ್ಕಳು ಏಳು ದಿನಗಳು ಗುಡಾರಗಳಲ್ಲಿ ಒಟ್ಟಾಗಿ ವಾಸ ಮಾಡುತ್ತಾರೆ. ಒಟ್ಟಾಗಿ ವೈವಿಧ್ಯಮಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆ. ಕಷ್ಟ ಸುಖಗಳನ್ನು ಹಂಚಿಕೊಳ್ಳುತ್ತಾರೆ. ಅವರಿಗರಿವಿಲ್ಲದೆ ಹೊಂದಾಣಿಕೆ ಮಾಡಿಕೊಳ್ಳುತ್ತಾರೆ. ತಮ್ಮ ಭಾವನೆಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಒಟ್ಟಾಗಿ ಊಟ ಮಾಡುತ್ತಾರೆ, ಕಲಿಯುತ್ತಾರೆ, ನಲಿಯುತ್ತಾರೆ. ಯಾವ ಶಿಕ್ಷಣವೂ ನೀಡಲಾಗದ ಜೀವನ ಕೌಶಲ್ಯ, ಜೀವನಾನುಭವ, ಪರಿಸರ ಮತ್ತು ಪರಿಸ್ಥಿತಿಯ ಜ್ಞಾನವನ್ನು ಪ್ರತ್ಯಕ್ಷವಾಗಿ ಎಲ್ಲಾ ಭೇದವನ್ನು ಮರೆತು, ದೇಶ, ಭಾಷೆ, ಜಾತಿ, ಮತ, ವಯಸ್ಸು, ಮರೆತು ನಾವೆಲ್ಲ ಒಂದೇ ಎಂದು ಬದುಕುತ್ತಾರೆ. ಮುಂದೆ ಇದು ಅವರ ಉತ್ತಮ ನಾಳೆಯ ಕನಸನ್ನು ನನಸಾಗಿಸುವ ದಿವ್ಯ ಗಾನವಾಗುತ್ತದೆ.

ಚಳುವಳಿಯ ಸದಸ್ಯರು ಎಲ್ಲಾ ಚಟುವಟಿಕೆಗಳಲ್ಲೂ ಗುಂಪುಗಳಲ್ಲಿ ಭಾಗವಹಿಸುತ್ತಾರೆ. ಈ ಸಿದ್ಧಾಂತದಲ್ಲಿ ನಾನು ಗೌಣ, ನಾವು ಪ್ರಧಾನ "ನಾನು ನನಗಾಗಿಯಲ್ಲ ನಾನು ನಮಗಾಗಿ "I not for I, I for we" ಎಂಬ ನಿಸ್ವಾರ್ಥ ಮನೋಭಾವದ ಅನುಭವವಾಗುತ್ತದೆ ಮತ್ತು ಅಭ್ಯಾಸವಾಗುತ್ತದೆ. ಕೇವಲ ಇದು ಚಳುವಳಿಯ ಸಿದ್ಧಾಂತವಲ್ಲ. ಭಾರತೀಯ ಸಂಸ್ಕೃತಿಯ ಸಿದ್ಧಾಂತವು ಆಗಿದೆ. "ವಸುಧೈವ ಕುಟುಂಬಕಂ" ಭೂಮಿಯೇ ಒಂದೇ ಕುಟುಂಬ. ಈ ಪರಿಕಲ್ಪನೆ ಎಲ್ಲರೂ ಒಟ್ಟಾಗಿ ಬದುಕಬೇಕೆಂಬ ಅರ್ಥವನ್ನು ಪ್ರತಿಪಾದಿಸುತ್ತದೆ.

ಲಾರ್ಡ್ ಬೇಡನ್ ಪಾವೆಲ್ಲರುವೃತ್ತಿಯಿಂದ ಸೈನ್ಯಾಧಿಕಾರಿಯಾದರೂ ಪ್ರವೃತ್ತಿಯಿಂದ ಶಾಂತಿಪ್ರಿಯರು ಆಗಿದ್ದರು. ಅವರ ಆಶಯ, ಸದ್ಭಾವನೆ ವಿಶ್ವಭ್ರಾತೃತ್ವ ಮತ್ತು ವಿಶ್ವಶಾಂತಿಯಾಗಿತ್ತು. ಅಂತರ ರಾಷ್ಟ್ರೀಯ ಮಟ್ಟದಲ್ಲಿ ಸ್ಕೌಟ್ ಬೆಳೆದಾಗ ಅವರಿಗೆ ವಿವಿಧ ರಾಷ್ಟ್ರದ ಮಕ್ಕಳನ್ನು ಒಗ್ಗೂಡಿಸಿ ಅಂತರ ರಾಷ್ಟ್ರೀಯ ಮಹಾಸಮಾವೇಶ ಮಾಡುವ ವಿಚಾರ ಹೊಳೆಯಿತು. ಮೊದಲನೆಯ ಅಂತರರಾಷ್ಟ್ರೀಯ ಸ್ಕೌಟ್ಸ್ ಜಾಂಬೂರಿ 1920 ರಲ್ಲಿ ನಡೆಯಿತು. ಅಂದಿನಿಂದ ಇಂದಿನವರೆಗೂ 4 ವರ್ಷಕ್ಕೊಮ್ಮೆ ಅಂತರರಾಷ್ಟ್ರೀಯ ಸ್ಕೌಟ್ಸ್ ಜಾಂಬೂರಿಯನ್ನು ವಿಶ್ವಸ್ಕೌಟ್ಸ್ ಸಂಸ್ಥೆ ನಡೆಸುತ್ತಾ ಬಂದಿದೆ. ಬಿ.ಪಿ ಯವರು ತಮ್ಮ ಬದುಕಿನ ಅವಧಿಯಲ್ಲಿ 5 ಜಾಂಬೂರಿಗಳಲ್ಲಿ ಭಾಗವಹಿಸಿದ್ದಾರೆ. "ನೀವೆಲ್ಲರೂ ಶಾಂತಿ ದೂತರು. ನೀವು ನಿಮ್ಮ ದೇಶಕ್ಕೆ ಸದ್ಭಾವನೆ, ಭ್ರಾತೃತ್ವ ಮತ್ತು ಶಾಂತಿಯ ಸಂದೇಶವನ್ನು ತೆಗೆದುಕೊಂಡುಹೋಗಿ. ನಿಮ್ಮ ದೇಶಕ್ಕೆ ಪ್ರಸಾರ ಮಾಡಿ ಈ ಮೂಲಕ ಶಾಂತಿಯುತ ವಿಶ್ವ, ಯುದ್ಧ ರಹಿತ ವಿಶ್ವವನ್ನು ಸ್ಥಾಪಿಸಲು ಕಾರಣರಾಗುವಿರಿ" ಎಂದು ತಿಳಿಸಿದ್ದಾರೆ.

ಈ ಎಲ್ಲಾ ವಿಚಾರಗಳ ಹಿನ್ನೆಲೆಯಲ್ಲಿ ಮಹಾಸಮಾವೇಶದ ಉದ್ದೇಶವೇ ಮಕ್ಕಳನ್ನು ಒಗ್ಗೂಡಿಸಿ ಭಿನ್ನತೆಗಳನ್ನು ಮೆಟ್ಟಿ ಸ್ನೇಹ ಸೌಹಾರ್ದತೆಯನ್ನು ಮೂಡಿಸುವುದಾಗಿದೆ ಈ ನಿಟ್ಟಿನಲ್ಲಿ "To-gether for better tomorrow" "ಉತ್ತಮ ನಾಳೆಗಾಗಿ ಜೊತೆಯಾಗೋಣ/ಒಟ್ಟಾಗೋಣ" ಎಂಬ ಸಂದೇಶವನ್ನು ಮಕ್ಕಳ ಮೂಲಕ ದೇಶ ವಿದೇಶಗಳಲ್ಲಿ ಪ್ರಸಾರ ಮಾಡಲು ನಾಳೆಯನ್ನು ಉತ್ತಮವಾಗಿಸಲು ಜೊತೆಗೂಡಿ ಯತ್ನಿಸೋಣ.

ಸ್ನೇಹ, ಶಾಂತಿ ನಮ್ಮದಾಗಲಿ, ಸ್ನೇಹ ಶಾಂತಿ ನಮ್ಮದಾಗಲಿ, ಸ್ಕೌಟ್ಸ್-ಗೈಡಿಂಗ್ ಚಿರಾಯುವಾಗಲಿ

**ಎಸ್.ಕೆ. ಪ್ರಭ,** ಎಲ್.ಟಿ(ಗೈ)
ಜಂಟಿ ರಾಜ್ಯ ಕಾರ್ಯದರ್ಶಿ(ಗೈ)

## 9 ಅಂಶಗಳನ್ನೊಳಗೊಂಡ ಸ್ಕೌಟ್ ಹಾಡು

(ಚನ್ನಪ್ಪ ಚನ್ನಗೌಡ ಹಾಡಿನ ಧಾಟಿಯಲ್ಲಿ ಹೇಳಬೇಕು)

ಸ್ಕೌಟ್ ಚಳುವಳಿಯ ಇದನ್ನ ಬಿ.ಪಿ. ಯವರು ತಂದಾರ
ಯುವಕರಿಗೆ ತಂದಾರ ತಂಗಿ ಜಗತ್ತಿಗೆ ಸಾರ್‍ಯಾರ

1907ರಲ್ಲಿ ಇದನ ಪ್ರಾರಂಭ ಮಾಡ್ಯಾರ
ವಿಶ್ವಕ್ಕೆ ತಂದಾರ ತಂಗಿ ಉಪಕಾರ ಮಾಡ್ಯಾರ

ಸ್ಕೌಟಿಗೆ ಸೇರಿದರ ತಂಗಿ ಪ್ರತಿಜ್ಞೆ ಮಾಡಸ್ತಾರ
ಪ್ರತಿಜ್ಞೆ ಮಾಡಸ್ತಾರ ತಂಗಿ ಅದರಂತೆ ನಡಸ್ತಾರ

ಸ್ಕೌಟ ಸೇರಿದರ ತಂಗಿ ವಿನಯ ಶೀಲನಾಗತ್ತಾರ
ಪ್ರಾಣಿ ಮಿತ್ರ ನಾಗತಾರ ತಂಗಿ ಶಿಸ್ತುಳ ನಾಗತಾರ

ಸ್ಕೌಟ ಸೇರಿದರ ತಂಗಿ ಧೈರ್ಯವಂತನಾಗತಾರ
ಮಿತವ್ಯಯ ನಾಗತಾನ ತಂಗಿ ಪರಿಶುದ್ಧ ನಾಗತಾರ

ಸ್ಕೌಟ ದೊಳಗss ತಂಗಿ ಶಿಭಿರಾಗಿ ಮಾಡತಾಸ್ತಾರ
ಹಾಡಾ ಹಾಡಸ್ತಾರ ತಂಗಿ ಕುಣಿಯಾಕ ಕಲಸ್ತಾರ

– **ಶ್ರೀ ಹೇಮಂತ ಲಮಾಣಿ,** ಸ್ಕೌಟ್ ಮಾಸ್ಟರ್, ಸಂಗೀತ ಶಿಕ್ಷಕ
ಸ.ಪ್ರೌ.ಶಾಲೆ, ಕುರುಬಗಟ್ಟ ತಾ॥ ಧಾರವಾಡ ಜಿಲ್ಲೆ

## ನನ್ನ ಪ್ರಾರ್ಥನೆ

ನನ್ನ ಒಡೆಯನೇ ನನ್ನೀ ಪ್ರಾರ್ಥನೆಯನ್ನು ನಡೆಸಿಕೊಡು
ನನ್ನ ಹೃದಯದ ದೌರ್ಬಲ್ಯವನ್ನು ತೊಡೆದುಹಾಕು
ಸುಖ-ದುಃಖಗಳನ್ನು ಸಮಾನತೆಯಿಂದ ಭರಿಸುವ ಶಕ್ತಿಯನ್ನು ನೀಡು

ದೀನದಲಿತರಲ್ಲಿ ಎಂದು ಉದಾಸೀನ ತೋರದಂತೆ
ದುಷ್ಟ ದರ್ಪರೆದಿರು ಎಂದು ತಲೆಬಾಗದಂತಿರುವ ಶಕ್ತಿಯನ್ನು ನೀಡು

ದಿನನಿತ್ಯದ ಕ್ಷುಲ್ಲಕ ವಿಷಯಗಳನ್ನು ಮರೆತು
ಮನದ ಭಾವನೆಗಳು ವಿಶಾಲಗೊಳ್ಳುವಂತೆ ಮಾಡು

ನನ್ನ ಶಕ್ತಿಯನ್ನೆಲ್ಲಾ ನಿನ್ನ ಇಚ್ಛೆಯಂತೆ
ಪ್ರೀತಿಯಿಂದ ಸಮರ್ಪಿಸುವ ಶಕ್ತಿಯನ್ನು ನೀಡು

– **ರವೀಂದ್ರನಾಥ ಟ್ಯಾಗೂರ್**

# 17th National Jamboree
## Bulletin - 2




**THE BHARAT SCOUTS & GUIDES, KARNATAKA**
#39, Shanthigruha, Palace Road, Bengaluru – 560 001
Phone: +91-80-22260017 :+91-80-22267470
Email: shq@bsgkarnataka.org.in, shanthigruha@bsgkarnataka.org.in

**THE BHARAT SCOUTS & GUIDES, MYSURU DISTRICT ASSN.**
Jay Chama Rajendra,Scouts& Guides Bhavan,
Behind Deputy Commissioners Office, Mysore-570005

**Jamboree Site**
Adakanahally Industrial Area, Mysuru District, Karnataka

## Foreword

My dear brothers and sisters of scouting fraternity

It gives me immense pleasure to share with you the second bulletin of 17th National Jamboree which is being hosted by Karnataka State at Mysuru from 29th December 2016 to 04th January 2017

Highlights on the information coverage are as follows:

1. Information on previous National Jamborees and Special Jamborees
2. Introduction to Jamboree Mascot for 17th National Jamboree
3. Information on Jamboree council, organizing committee and other committees along with job profile
4. Information on programs being planned for the Jamboree along with information necessary for participating contingents to prepare
5. Information on tourist attractions in the city of Mysuru and Bengaluru for consideration on sight seeing

I am sure this bulletin will give you all the necessary information that will be required to prepare your state contingent. While you will see introduction of new activities to encourage the youth allowing them to voice out their opinion for betterment of the movement the heritage city of Mysuru will provide you an experience for life.

I am grateful to the Government of Karnataka led by Sri Siddaramaiah, hon'ble chief minister for their spontaneous and whole hearted support to make this Jamboree possible.

Looking forward to receive you along with your contingent at the Jamboree.

Yours In Scouting

**P. G. R. Sindhia**
State Chief Commissioner
The Bharat Scouts & Guides, Karnataka
Jamboree Team

## JamboreeTeam

### Jamboree Council

**The Jamboree council will be headed by Honorable Chief Minister of Karnataka**
**The Jamboree council has the following responsibilities**

1. Oversee progression on activities towards Jamboree
2. Take necessary measures in the areas where progression is blocked due to dependency on external agency
3. Set up regular review with Jamboree Organizing Committee and handhold where required

**Jamboree Location:** Following is the detailed information on various aspects of Jamboree such as location, commutation, communication etc.

**Jamboree Site Address:** Adakanahally Industrial Area, Mysuru District, Karnataka

**Jamboree Office:** Jamboree Secretariat, The Bharat Scouts & Guides, Karnataka, MysuruDistrict Association, Sri Jayachamarajendra Scouts & Guides Bhavan, Behind Deputy Commissioner Office, Mysuru–570005, Emal: bsgmysuru1917@gmail.com, Phone: 0821-2424779

**Address of the Host State Association: The Bharat Scouts & Guides, Karnataka,** #39, Shanthigruha, Palace Road, Bengaluru – 560 001, Phone: +91-80-22260017 : +91-80-22267470, Email: shq@bsgkarnataka.org.in, shanthigruha@bsgkarnataka.org.in

**Arrival & Departure:** Contingents are requested to report at Jamboree site on 28th of December 2016 before lunch. Contingents will be allowed to depart from Jamboree after getting no-due certificate from Jamboree office on 04th of January 2017 on recommendation of Sub-Camp Chief.

**Railway Assistance:** South Western Railway authorities will open a booth in Jamboree city for issuing Railway Concessions and assist in return reservation.

**How to Reach The Jamboree Site?:** The Jamboree Site is 17 Kms away from the Mysuru City and 159 Kms from Bengaluru City Railway Station. Jamboree authorities will arrange transport on cost from Mysuru Railway Station and Bus Station.

Contingents will be received at railway stations and bus terminals. All arriving contingents can contact at the reception counter, specially established for the purpose. **Transportation from Mysuru city railway station or bus station to the Jamboree city will cost Rs. 30/- per person.**

**Weather:** This is one of the best times of the year to visit Mysore because the weather is cool with temperature dipping to a minimum of 10°C. December is considered to be the coldest month with the temperature dipping in the evenings and hence all contingents are advised to carry warm clothing.

**Passes and permission:** Identity card or pass is a must for everybody in the Jamboree city. Scouts and Guides, Rovers and Rangers will not be permitted to go out of the Jamboree area. However contingent Staff members only with the permission of contingent leader for local work can obtain passes from the Security Counter for going out to the town. All supporting staff will be provided with identity cards to facilitate their movements in Jamboree Area.

Visitor day passes can be obtained from the Jamboree office / site to visit the Jamboree

### Composition of State Contingents

Each participating State contigent shall comprise of the following :
Contingent leader - One for scout wing, one for guide wing
Deputy contingent leader - One for scout wing, one for guide wing
Quarter master - One for scout wing, one for guide wing
Deputy quarter Master - One for scout wing, one for guide wing
Activity leader - One for scout wing, one for guide wing
Transport In Charge - One for scout wing, one for guide wing



Jamboree Mascot

### Contingent Kit

Following material is a must with the contingent for better performance. Flag, Material of colour party, 3 name plates size 24" X 12" with holder of 12" (name of State will be written in big Capital Letters) material for contingent Gate, Material for Arena activities, material for State Exhibition, Skill-O-Rama, global Development Village, Pageant Show, Cultural demonstration & food, Camp Fire, Folk Dances, Physical Displays and Musical instruments, Emergency light etc. Use of firewood in banned by the Karnataka State Government. No firewood will be allowed. Cooking gas cylinders and stoves at cost will be made available in the market area. The advance party can procure them & install at the allotted area of Kitchen.

**Kitchen & Cooking Facilities**

State wise separate place for cooking will be allotted with running water & light facility. Cooking will not be allowed in the Sub-Camp areas or any other places. Use of firewood in the kitchen is banned. Gas cylinders and stoves will be made available in market area for hiring.

**Central Cafeteria**

There will be central cafeteria for NHQ identified staff,guests, overseas contingents &service Rovers and Rangers. Food coupons will be issued at the time of registration.

**Registration & Allotment**

Registration of the participants of each State will only be done in advance on the basis of the information given by the States in a prescribed format to be circulated to States. The filled up formats from the States should reach the Bharat Scouts & Guides, National Headquarters, New Delhi on or before 30th November, 2016, so that computerized identity cards can be issued to participants on arrival. The allotment of the accommodation will also be done through the computer based on the quota allotted and No. of contingent attending. It would be more convenient if the States pay their Registration, Development and Insurance Fee in advance according to the list of the participants. Sending the formats before 30th November, 2016 is a must. Contingents will be given their Souvenir kit on arrival at Jamboree City. This will avoid long waiting near the entrance of the Jamboree Camp. Without ID, contingents will not be allowed into the Jamboree.

**No Plastic**

***Avoid using plastic material such as carry bags, plastic spoons, plates, bottles etc. Bring your own steel plate, steel tumbler, steel spoon, jute bag, paper bag etc.***

**Personal Kit**

**Each contingent shall carry the following:**

- 2 sets of Correct and Complete Uniform
- Sleeping Bag / Light Warm Bed
- Change of clothes, Night Wears
- Steel Plate, tumbler, spoon
- Personal Requisites
- Torch with batteries
- Pen, Book /Dairy
- Water Bottle
- Toilet Requisites
- Compass
- Personal medication

**Kitchen Facilities**

- States will have separate place for cooking in allotted slot with water and light facility.
- Gas cylinders and stoves will be made available on cost of hire.

**Advance Party:** Sending responsible advance party will be very helpful to collect all information and doing registration work etc.

They should arrive at least one or two days earlier at the Jamboree ground and contact the Jamboree Office

They should arrive at least one day in advance at the Jamboree ground and contact Jamboree Office preferably on 27th December, 2016

**Sight Seeing :** There will be separate sightseeing office setup by the Tourism Department and K.S.R.T.C. Department at the Jamboree site.
The contingents may register their sightseeing program on cost
Details will be provided by the Department

The Karnataka State Road Transport Corporation [KSRTC] shall provide the bus required for sight-seeing based on contingent's requirement.
Price of hiring a bus for sight-seeing is as follows:
Non-AC with seating capacity of 42 will be Rs. 10,688/- ( 250 kilometers )
AC bus with seating capacity of 38 will be Rs. 23,165/- ( 300 kilometers)

**Facilities at Jamboree Site**

**Jamboree Market**

- Banks with ATM,
- Post Office,
- Telephone,
- Super Market

**Water and Sanitation**

- Water
- Sanitation

**Fire Safety, Health Safety, Equipment Store, Lost & Found, Jamboree Bulletin**

**Jamboree Security**

- Jamboree site will be secured with CCTV Cameras and a monitoring station

**Activity Area**

The 17th National Jamboree shall witness a wide range of activities based on physical, mental, skill and fun.

**Inaugural and Valedictory Functions**

For the inaugural and valedictory ceremonies compositionof the platoon for Marchpast in the arena will be as follows :

| | | |
|---|---|---|
| Placard Holder S/G | - | 1 |
| Colour Party | - | 5 |
| Leader(S) | - | 1 |
| Leader G | - | 1 |
| Scouts | - | 18 |
| Guides | - | 18 |
| **Total** | - | **44** |

**Following is the segmentation fo activities at a high level**

1. Sub-camp wise activities,
2. Group activities - Wing Wise
3. Joint group activities - Both Wings,
4. Individual Activities

**State Gate:** Each State is expected to prepare their Gate separately wing wise. Collection of required material to prepare gate is the responsibility of the State. Proportion, beauty, skill, originality, material used and special appeal (attraction) of the gate will be observed. Metal frames, use of Nut-Bolts will disqualify the project. Judgement will take place for all days.

**Scout Guide Skills**

- Patrol Pioneering, Camp Craft
- Signalling –Morse & Semaphore
- First Aid
- Estimation
- Tent Pitching

One patrol of scout and one patrol of guide with each consisting of 8 members can participate. Every state will participate in the above competitions.

**Pioneering Project:** Scouts & Guides will prepare separate projects each. The pioneering projects wing wise from each State will be allowed. Adult Leaders can also help the Scouts/Guides in preparing pioneering projects. Usefulness, correctness of knots and lashings, skill involved, cleanliness in building, size of the prepared pioneering project will be observed.

**March Past:** 32 members including leader will be allowed to participate in March Past. No adult leader will participate. The platoon will march in Threes. Salute, Commands, Smartness, Leadership Uniformity and correct marching will be observed. The composition will be as under.

| | **Scouts** | **Guides** |
|---|---|---|
| Placard Holder | 1 | 1 |
| Leader | 1 | 1 |
| Scouts/Guides | 30 | 30 |
| | 32 | 32 |

**Band:** Each State contingent will be allowed to bring with them one Band party wing wise. Presenting the mixed Band is also allowed. Band parties will be judged separately.

One Adult Leader will be allowed to guide the Band team but the Scout/Guide only will lead the team in the competition. Where Band parties are mixed marks will be given to both the wings seeing the number of the Scouts and Guides, if number of Scouts and Guides in the Band party are equal, equal marks will be given to both the wings. Each band party may have their own ceremonial dress but in the competition, only Scout/Guide uniform will be allowed.

No. of Participants for the competition

**Minimum:** 15 Scouts + 1 Leader + 1 placard holder = 17

**Maximum:** 30 Scouts + 1 Leader + 1 placard holder = 32

**Physical Display:** Physical display will be judged wing-wise in the arena. Minimum number of the participants in display will be 24. No Adult Leader will be allowed to participate in physical display, but Band rhythm or musical support can be

given by the Adults. Subject of Physical Display will be selected by the State. Originality, Presentation, uniformity, skill, leadership and Gymnastic value in physical exercise will be judged by the experts in this field.

**Colour Party:** Each state contingent will be allowed to bring one Colour party of five members. They should wear Scout/Guide uniform with white gloves and anklets.

Flag bearer may wear leather carrier belt. Colour party should be made up of 3 Scouts and 2 Guides or vice versa. Three in front column, the one to the left carrying the Association flag of the Bharat Scouts & Guides and to the right carrying the National Flag.

Flag will be on flag staff of each 7 feet long. Flag top 10 cm. Width be used. Flag staff be held by the right hand at the mouth level with palm inwards and forearm at right angles to flag staff. Points which will be observed for judgment of standard of the colour party are marching, carrying position, position at the time of flying the flag by the leader of the colour party, marching when entering to the saluting base, opening flag and gathering flag while passing saluting base, correct uniform, leadership and smartness. No adult Leader will be allowed with the colour party.

***Pageant Show:*** India is one of the ancient civilization known for diversity with the bonding of oneness among all. In this jamboree the complete its diversity of languages and culture will give an opportunity to interact and learn about different Indian cultures. This will promote National Pride among young people. The entire country with its diversity and unity will be present around the arena where thematic state exhibition, folk songs and Dances in the Streets with mouthwatering food items will mark a permanent stamp in everybody's mind. This is Bharat Darshan, a unique opportunity for all of us to see and feel our vast country at one place "***I am proud to be an Indian***".

**Around The World**

"AROUND THE WORLD" is an innovative fun activity with educative value that has been framed for the Scouts & Guides to have better understanding of World Brotherhood / Sisterhood

Each State will be allotted one Country and the Specific State has to display all the information i.e. Scout / Guide Uniform, Culture, History, Geography, Scouting Guiding of that Country through Banners / Placards / Flex Boards / Charts / Costumes / Models Exhibits etc.

Content to be prepared in English and will be displayed in the Jamboree at specific time and place which will be notified. Country name with your State Name board / banner shall be made and the size of which will be 30"X15" size of the alphabets shall be in 6" The States name will be below the Country name size of the alphabets shall be in 4"

**All state contingents to confirm participation by 10th December 2016**

**List of countries assigned to states**

| | | |
|---|---|---|
| 1 | Andaman & Nicobar | Peru |
| 2 | Andhra Pradesh | Austria |
| 3 | Arunachal Pradesh | Cook Islands |
| 4 | Assam | Denmark |
| 5 | Bihar | Cyprus |
| 6 | Central Railway | Sweden |
| 7 | Chandigarh U.T | Republic of China, Taiwan |
| 8 | Chattisgarh | Egypt |
| 9 | Dadar Nagar Haveli | Fiji |
| 10 | Delhi | Kenya |
| 11 | East Central Railway | Belgium |
| 12 | East Cost Railway | Bangladesh |
| 13 | Eastern Railway | Netherlands |
| 14 | Goa | Mexico |
| 15 | Gujarat | Dominian Republic |
| 16 | Haryana | Australia |
| 17 | Himachal Pradesh | Libya |
| 18 | Jammu & Kashmir | Greece |
| 19 | Jharkhand | Russia |
| 20 | Karnataka | India |
| 21 | Kerela | Canada |
| 22 | KVS | Newzealand |
| 23 | Madhya Pradesh | Spain |
| 24 | Maharashtra | Brazil |

| | | |
|---|---|---|
| 25 | Manipur | Uganda |
| 26 | Meghalaya | Thailand |
| 27 | Mizoram | Srilanka |
| 28 | Nagaland | Nepal |
| 29 | N.E.Railway | Malaysia |
| 30 | N.F.Railway | Norway |
| 31 | N. W. Railway | Mauritius |
| 32 | North Central Railway | Maldives |
| 33 | Northern Railway | U.A.E (UNITED ARAB EMIRATES) |
| 34 | NVS | Italy |
| 35 | Odisha | United States of America |
| 36 | Pondicherry | Portugal |
| 37 | Punjab | Ghana |
| 38 | Rajasthan | Switzerland |
| 39 | S. E. C. Railway | Brunei |
| 40 | S. W. Railway | Jamaica |
| 41 | S.C.Railway | Singapore |
| 42 | S.E.Railway | Mongolia |
| 43 | Sikkim | Hongkong |
| 44 | Southern Railway | Kuwait |
| 45 | Tamil Nadu | Central African Republic |
| 46 | Telangana | Ukraine |
| 47 | Tripura | Israel |
| 48 | Uttar Pradesh | France |
| 49 | Uttarakhand | Philippines |
| 50 | W. C. Railway | Romania |
| 51 | West Bengal | Japan |
| 52 | Western Railway | United Kingdom |

Refer website or search over Wikipedia / google and obtain information necessary for preparation

**Exhibition / Hobby Centre**

The Jamboree will have an exhibition set up where participants will be able to display exhibits.
Exhibits may be any of the following:

**Kite flying, Yoga Morning, Awards and certificates, Individual Activities, Group Activities**

National Commissioner's Shield

**Joint Activities**

*Chief National Commissioner's Flag*

**First Day Postal Cover**

To mark the beginning of Jamboree, first day cover and commemorative stamps will be released based on the theme of scouting / guiding and Jamboree. In addition, a commemorative stamp will be released to mark the centenary year of cubbing.

**Exchange Corner**

**New Year Eve**

With the Jamboree in progression while the calendar year transits from 2016 to the year 2017, it is time for us to cherish the pleasant moments we have had in the past while welcoming the future.

On this occasion a grand celebration is being planned with all participating contingents being involved. One of the key factors for this celebration will be "Fashion Show" where each state shall depute a selected two rovers and two rangers to take part in.

**Many More activities and Programmes (Some of them for the first time) are awaiting at the Jamboree**

**COME - PARTICIPATE - ENJOY**

# ಶ್ರದ್ಧಾಂಜಲಿ



ಹಾವೇರಿ ಜಿಲ್ಲೆಯ ಜಿಲ್ಲಾ ತರಬೇತಿ ಆಯುಕ್ತರು ಆಗಿ ಸೇವೆ ಸಲ್ಲಿಸುತ್ತಿದ್ದ **ಶ್ರೀಮತಿ ಉಮಾ ಮರಿಗೆಂಚಣ್ಣನವರ,** ಅವರು ದಿನಾಂಕ 29-10-2016 ರಂದು ಅವರ ಸ್ವಗ್ರಾಮದಲ್ಲಿ ನಿಧನ ಹೊಂದಿರುತ್ತಾರೆ.

ಇವರು ದೈಹಿಕ ಶಿಕ್ಷಕಿಯಾಗಿ ಸಿಂಧೂರ ಸಿದ್ಧಪ್ಪ ಮಹಿಳಾ ಕಾಲೇಜಿನಲ್ಲಿ ವೃತ್ತಿಯನ್ನು ಪ್ರಾರಂಭಿಸಿ 1979ರಲ್ಲಿ ಗೈಡ್ ಕ್ಯಾಪ್ಟನ್ ತರಬೇತಿ ಪಡೆದು ಎಲ್.ಟಿ. ತರಬೇತಿಯನ್ನು ಸಹಪೂರ್ಣಗೊಳಿಸಿದ್ದರು. ಸದರಿಯವರು ಪತಿ, ಒಬ್ಬ ಪುತ್ರ, ಇಬ್ಬರು ಪುತ್ರಿಯರು ಹಾಗೂ ಅಪಾರ ಬಂಧು ಬಳಗವನ್ನು ಅಗಲಿದ್ದಾರೆ.

ಮೃತರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಗೂ ಅವರ ಅಗಲಿಕೆಯ ದುಃಖವನ್ನು ಭರಿಸುವ ಶಕ್ತಿಯನ್ನು ಅವರ  ಬಂಧು ಬಳಗದವರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.



ಶಿವಮೊಗ್ಗ ಜಿಲ್ಲೆಯ ಸ್ಥಾನಿಕ ಆಯುಕ್ತರಾಗಿ ಸೇವೆ ಸಲ್ಲಿಸುತ್ತಿದ್ದ **ಶ್ರೀಮತಿ ಪಿ. ಪದ್ಮಾವತಿ** ಅವರು ಅವರು ದಿನಾಂಕ 15-10-2016 ರಂದು ಅವರ ಸ್ವಗ್ರಾಮದಲ್ಲಿ ನಿಧನರಾದರು.

ಇವರು ಶಿಕ್ಷಿಕಿ ವೃತ್ತಿಯಲ್ಲಿ ಜನಪ್ರಿಯತೆಯನ್ನು ಗಳಿಸಿದ್ದರು. ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಪ್ರಥಮ ಆಯುಕ್ತರಾಗಿ ಸೇವೆ ಸಲ್ಲಿಸಿದ್ದರು.

ಮೃತರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಗೂ ಅವರ ಅಗಲಿಕೆಯ ದುಃಖವನ್ನು ಭರಿಸುವ ಶಕ್ತಿಯನ್ನು ಅವರ  ಬಂಧು ಬಳಗದವರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.



ಶ್ರೀ ಎ. ಲಾಜರ್, ಸ್ಕೌಟ್ ಮಾಸ್ಟರ್ ಇವರು ದಿನಾಂಕ 10-10-2016 ರಂದು ಚಾಮರಾಜನಗರದಲ್ಲಿ ಅಕಾಲ ಮರಣಕ್ಕೆ ತುತ್ತಾದರು.

ಇವರು ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿ ಹೊಂದಿದ್ದು ಸುಮಾರು ವರ್ಷಗಳಿಂದ ಸ್ಕೌಟ್ ಸಂಸ್ಥೆಯಲ್ಲಿ  ಸೇವೆ ಸಲ್ಲಿಸಿಸುತ್ತಿದ್ದರು. ಇವರು ಪತ್ನಿ ಒಬ್ಬ ಪುತ್ರ ಮತ್ತು ಇಬ್ಬರು ಪುತ್ರಿಯರು ಹಾಗೂ ಅಪಾರ ಬಂಧು-ಬಳಗವನ್ನು ಅಗಲಿದ್ದಾರೆ.

ಮೃತರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಗೂ ಅವರ ಅಗಲಿಕೆಯ ದುಃಖವನ್ನು ಭರಿಸುವ ಶಕ್ತಿಯನ್ನು ಅವರ  ಬಂಧು ಬಳಗದವರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.



ಶ್ರೀಮತಿ ವಿನೋದ, ಹೆಚ್.ಡಬ್ಲ್ಯೂ.ಬಿ. (ಗೈಡ್ಸ್) ಇವರು ದಿನಾಂಕ 01-10-2016 ರಂದು ಮೈಸೂರಿನಲ್ಲಿ ನಿಧನರಾದರು.

ಇವರು ಮೈಸೂರಿನ ವಿದ್ಯಾವರ್ಧಕ ಜೂನಿಯರ್ ಕಾಲೇಜು ಪ್ರೌಢಶಾಲಾ ವಿಭಾಗದಲ್ಲಿ ಶಿಕ್ಷಕಿಯಾಗಿ ಮತ್ತು ಗೈಡ್ ಕ್ಯಾಪ್ಟನ್ ಆಗಿ ಕಾರ್ಯ ನಿರ್ವಹಿಸುತ್ತಿದ್ದರು.

ಮೃತರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಗೂ ಅವರ ಅಗಲಿಕೆಯ ದುಃಖವನ್ನು ಭರಿಸುವ ಶಕ್ತಿಯನ್ನು ಅವರ  ಬಂಧು ಬಳಗದವರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

**- ರಾಜ್ಯ ಕಾರ್ಯದರ್ಶಿ**

# ಸಂಸ್ಥಾಪನಾ ದಿನಾಚರಣೆಯ ಅಂಗವಾಗಿ ವಿವಿಧ ಜಿಲ್ಲೆಗಳಲ್ಲಿ ಜರುಗಿದ ಧ್ವಜ ಚೀಟಿ ಬಿಡುಗಡೆ ಕಾರ್ಯಕ್ರಮಗಳು




















Regd. as News Paper (Magazine) RNI No: 13348/1959. Postal Regd. No. KA/BGGPO/2580/2015-17
Permitted to Post under WPP System Vide No.: WPP-340, Date of Publishing 28th of Every Month
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 04+32 = 36)

ಬಳ್ಳಾರಿಯಲ್ಲಿ ಅಕ್ಟೋಬರ್ ೨ರಂದು ನಡೆದ ಗಾಂಧಿಜಯಂತಿ ಪ್ರಯುಕ್ತ ಸಮುದಾಯ ಸೇವಾ ಶಿಬಿರದಲ್ಲಿ ತೊಡಗಿರುವ ಸ್ಕೌಟ್ಸ್-ಗೈಡ್ಸ್‌ಗಳು

ದಕ್ಷಿಣ ಕನ್ನಡ ಜಿಲ್ಲೆ ಪಂಜ ಸ್ಥಳೀಯ ಸಂಸ್ಥೆವತಿಯಿಂದ ಜರುಗಿದ ಪಟಾಲಂ ನಾಯಕರ ತರಬೇತಿ ಶಿಬಿರದಲ್ಲಿ ಸಾಹಸ ಚಟುವಟಿಕೆಯಲ್ಲಿ ತೊಡಗಿರುವ ಗೈಡ್

ಹಾವೇರಿಯಲ್ಲಿ ಜರುಗಿದ ಗಾಂಧಿ ಜಯಂತಿ ಪ್ರಯುಕ್ತ ಹಾವೇರಿ ಸರ್ಕಾರಿ ಆಸ್ಪತ್ರೆಯ ಆವರಣದಲ್ಲಿ ರೋವರ್ಸ್-ರೇಂಜರ್ಸ್‌ಗಳು ಸ್ವಚ್ಛ ಭಾರತ ಅಭಿಯಾನದಲ್ಲಿ ತೊಡಗಿರುವುದು

ಚಾಮರಾಜನಗರ ಜಿಲ್ಲೆಯಲ್ಲಿ ಜರುಗಿದ ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಕಬ್ಸ್-ಬುಲ್‌ಬುಲ್ಸ್‌ಗಳು ಸ್ವಚ್ಛತಾ ಕಾರ್ಯಕ್ರಮದಲ್ಲಿ ತೊಡಗಿರುವುದು

ಕಾರವಾರ ಜಿಲ್ಲೆಯಲ್ಲಿ ಜರುಗಿದ ಗಾಂಧಿ ಜಯಂತಿ ಅಂಗವಾಗಿ ಸ್ವಚ್ಛತಾ ಅಭಿಯಾನ ಜಾಥದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ತೊಡಗಿರುವುದು

ಚಿತ್ರದುರ್ಗ ಜಿಲ್ಲೆ ಗೈಡ್ಸ್‌ಗಳು ಚಾರಣ ಶಿಬಿರದಲ್ಲಿ ಪಾಲ್ಗೊಂಡಿರುವುದು.

If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

5.SRI.KONDAJJI.B.SHANMUKHAPPA
Vice-President
Bharat Scouts and Guides, Karnataka
'Nagashree', # 23, 14th 'A' Cross
2nd Stage, 2nd Phase
West of Chord Road
Mahalakshmipuram
Bangalore-560086.

**Published by : The Bharat Scouts & Guides, Karnataka, State Headquarters**
**Shanthi Gruha**, #39, Palace Road, Bengaluru - 560 001. **Publisher & Editor : Siddaiah**, IAS (Retd.)
**Printed by : L. Lingappa, M.D. at Sathyasri Printers Pvt. Ltd.**, 16/1, 3rd Cross, 2nd Main, Kasturiba Nagar, Mysore Road, Bengaluru-26